CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ನವೆಂಬರ್ ೪, ೨೦೦೪ (ಕಾರ್ತಿಕ ೧೩, ಶಕ ವರ್ಷ ೧೯೨೬) | ಸಂಚಿಕೆ ೪೪ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

**ಇಂಧನ ಸಚಿವಾಲಯ**

**ವಿಷಯ :** ಮೆಸರ್ಸ್ ಐ. ಎಂ. ಸುರೇಂದ್ರ ರವರಿಗೆ ಕೋಲೋಪಟ್ಟಿ 1.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Kolopatty Mini Hydel Scheme) ಅನುಷ್ಠಾನಗೊಳಿಸಲು ಕಾಲಮಿತಿಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 11 ಎನ್‌ಸಿಇ 2004 ದಿನಾಂಕ: 21.7.2004.

2. ಮೆಸರ್ಸ್ ಐ. ಎಂ. ಸುರೇಂದ್ರ ಚಿಕ್ಕಮಗಳೂರು ಇವರ ಮನವಿ ದಿನಾಂಕ: 18.8.2004.

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ದಿನಾಂಕ: 21.7.2004ರ ಸರ್ಕಾರಿ ಆದೇಶದಲ್ಲಿ ಮೆಸರ್ಸ್ ಐ. ಎಂ. ಸುರೇಂದ್ರ ರವರಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ನಾಪೋಕ್ಲು ಗ್ರಾಮದ ಕೋಲೋಪಟ್ಟಿ ಹೊಳೆಗೆ ಅಡ್ಡಲಾಗಿ 1.00 ಮೆಗಾವ್ಯಾಟ್ ಸಾಮರ್ಥ್ಯದ ಕೋಲೋಪಟ್ಟಿ ಕಿರು ಜಲ ವಿದ್ಯುತ್ ಯೋಜನೆಯನ್ನು (Kolopatty Mini Hydel Scheme) ಹಂಚಿಕೆ ಮಾಡಲಾಗಿತ್ತು. ಸದರಿ ಆದೇಶದಲ್ಲಿ, ಈ ಯೋಜನೆಯನ್ನು 6 ತಿಂಗಳ ಒಳಗಾಗಿ ಪ್ರಾರಂಭಿಸಬೇಕೆಂಬ ಷರತ್ತನ್ನು ಇನ್ನಿತರ ಷರತ್ತುಗಳೊಂದಿಗೆ ವಿಧಿಸಲಾಗಿತ್ತು.

2. ಮೇಲೆ (2)ರಲ್ಲಿ ಓದಲಾದ ದಿನಾಂಕ: 18.8.2004ರ ಮನವಿಯಲ್ಲಿ ಶ್ರೀ ಐ. ಎಂ. ಸುರೇಂದ್ರ ರವರು ಈ ಯೋಜನೆಯನ್ನು 6 ತಿಂಗಳ ಒಳಗಾಗಿ ಪ್ರಾರಂಭಿಸಬೇಕೆಂಬ ಷರತ್ತನ್ನು ಸರ್ಕಾರವು ವಿಧಿಸಿದ್ದು, ತಾವು ಈ ಯೋಜನೆಗಾಗಿ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಅನುಮೋದನೆ ಪಡೆಯಬೇಕಿದ್ದು, ಈ ಯೋಜನೆಯನ್ನು 6 ತಿಂಗಳ ಒಳಗಾಗಿ ಪ್ರಾರಂಭಿಸಲು ಸಾಧ್ಯವಿಲ್ಲವೆಂದು ತಿಳಿಸಿ, ಈ ಯೋಜನೆಯನ್ನು 24 ತಿಂಗಳ ಒಳಗಾಗಿ ಪ್ರಾರಂಭಿಸಬೇಕೆಂಬ ಕಾಲಮಿತಿಯನ್ನು ನಿಗದಿಪಡಿಸಿ ಆದೇಶವನ್ನು ಹೊರಡಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

3. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 11 ಎನ್‌ಸಿಇ 2004, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2004**

4. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಮೆಸರ್ಸ್ ಐ. ಎಂ. ಸುರೇಂದ್ರ ಕಂಪೆನಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ನಾಪೋಕ್ಲು ಗ್ರಾಮದ ಕೋಲೋಪಟ್ಟಿ ಹೊಳೆಗೆ ಅಡ್ಡಲಾಗಿ 1.00 ಮೆಗಾವ್ಯಾಟ್ ಸಾಮರ್ಥ್ಯದ ಕೋಲೋಪಟ್ಟಿ ಕಿರು ಜಲ ವಿದ್ಯುತ್ ಯೋಜನೆಯನ್ನು (Kolopatty Mini Hydel Scheme) ಸರ್ಕಾರಿ ಇಲಾಖೆಗಳಿಂದ ಅನುಮೋದನೆಯನ್ನು ಪಡೆದುಕೊಂಡು 6 ತಿಂಗಳ ಒಳಗಾಗಿ ಪ್ರಾರಂಭಿಸಬೇಕೆಂಬ ಷರತ್ತನ್ನು ಸಡಿಲಿಸಿ, ಎರಡು ವರ್ಷಗಳ (24 ತಿಂಗಳ) ಒಳಗಾಗಿ, ಪೂರ್ಣಗೊಳಿಸಬೇಕೆಂಬ ಷರತ್ತನ್ನು ವಿಧಿಸಿದೆ.

5. ದಿನಾಂಕ: 21.7.2004ರ ಸರ್ಕಾರಿ ಆದೇಶದ ಇನ್ನಿತರ ಷರತ್ತು ಮತ್ತು ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯಲಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಲ್. ಜಯರಾಂ**

ಪಿ.ಆರ್. 1092

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ :** ಮೆಸರ್ಸ್ ಶರಣ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ 1 ಮೆಗಾವ್ಯಾಟ್ ಸಾಮರ್ಥ್ಯದ ಯಾದಗಿರ್ ಕಿರು ಜಲ ವಿದ್ಯುತ್ ಯೋಜನೆಯನ್ನು (Yadgir Mini Hydel Scheme) ಹಂಚಿಕೆ ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ:06:ಯಾದಗಿರಿ: 2004:1555 ದಿನಾಂಕ: 17.8.2004.

2. ದಿನಾಂಕ: 23.8.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಶರಣ್ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಯಾದಗೀರ್ ತಾಲ್ಲೂಕಿನ ಭೀಮಾ ನದಿಗೆ ಕಟ್ಟುತ್ತಿರುವ ಬ್ಯಾರೇಜಿಗೆ ಅಡ್ಡಲಾಗಿ 1 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 293 ಎನ್‌ಸಿಇ 2004 ಬೆಂಗಳೂರು ದಿನಾಂಕ: 9ನೇ ಸೆಪ್ಟೆಂಬರ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಶರಣ್ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಯಾದಗೀರ್ ತಾಲ್ಲೂಕಿನ ಭೀಮಾ ನದಿಗೆ ಕಟ್ಟುತ್ತಿರುವ ಬ್ಯಾರೇಜಿಗೆ ಅಡ್ಡಲಾಗಿ 1 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Yadgir Mini Hydel Scheme) (ಲಾಂಜಿಟ್ಯೂಡ್ "77-06'-28.13" ಪೂರ್ವ ಲ್ಯಾಟಿಟ್ಯೂಡ್ 16-44'-17.6" ಉತ್ತರ) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ. 25.000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1094

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ಕಂದಾಯ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಕಂಇ 495 ಮುನೋಮು 2004 ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 421 ಮುನೋಸೊ 2002, ದಿನಾಂಕ: 13.07.2004ರಲ್ಲಿನ "ಷೇರು"ಗಳನ್ನು ಎಂಬ ಪದದ ಬದಲು "ಬಾಂಡ್" ಗಳೆಂದು ಮತ್ತು ದಿನಾಂಕ: 12.3.2004 ಬದಲಾಗಿ 12.03.2003 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1095

**ಡಿ. ಎನ್. ಶ್ರೀಮುಖಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

**ವಿಷಯ :** ಶ್ರೀ ನಾಗರಾಜಪ್ಪ ಹೊನ್ನಾಳ, ಹಿಂದಿನ ತಹಶೀಲ್ದಾರ್, ಕಡೂರು ತಾಲ್ಲೂಕು ಮತ್ತು ಸದರಿ ತಾಲ್ಲೂಕು ಕಛೇರಿಯ ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ದಂಡನೆ ವಿಧಿಸಿ ಅಂತಿಮವಾಗಿ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ :**
1. ದಿನಾಂಕ: 27.06.1996ರ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 90 ಎಡಿಇ 93 (ಭಾಗ).
2. ಹಿಂದಿನ ಮೈಸೂರು ವಿಭಾಗದ ವಿಭಾಗಾಧಿಕಾರಿ ಹಾಗೂ ವಿಚಾರಣಾಧಿಕಾರಿಯವರ ದಿನಾಂಕ: 14.12.2001ರ ವಿಚಾರಣಾ ವರದಿ.
3. ದಿನಾಂಕ: 21.11.2003ರ 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ 90 ಎಡಿಇ 93 (ಭಾಗ)
4. ಲಿಖಿತ ಹೇಳಿಕೆ:

| | | |
|---|---|---|
| 1. | ಶ್ರೀ ಜಿ. ಎಂ. ಮರುಳಸಿದ್ದಪ್ಪ | ದಿನಾಂಕ: - ಇಲ್ಲ - |
| 2. | ಶ್ರೀ ಹೆಚ್. ಆರ್. ರಂಗರಾಜ | ದಿನಾಂಕ: 6.12.2003 |
| 3. | ಶ್ರೀ ಡಿ. ಸಿ. ಗಂಗಾಧರ | ದಿನಾಂಕ: 6.12.2003 |
| 4. | ಶ್ರೀ ಎ. ಪಿ. ಗಣೆಯನಾಯಕ | ದಿನಾಂಕ: - ಇಲ್ಲ - |
| 5. | ಶ್ರೀ ಬಿ. ಕೆ. ಗಜೇಂದ್ರ | ದಿನಾಂಕ: 10.12.2003 |
| 6. | ಶ್ರೀ ಹೆಚ್. ಜಿ. ತಮ್ಮಯ್ಯ | ದಿನಾಂಕ: 13.12.2003 |
| 7. | ಶ್ರೀ ನಾಗರಾಜಪ್ಪ ಹೊನ್ನಾಳ | ದಿನಾಂಕ: 4.12.2003 |
| 8. | ಶ್ರೀ ಬಿ. ರಾಜಶೇಖರಪ್ಪ | ದಿನಾಂಕ: 18.12.2003 |
| 9. | ಶ್ರೀ ಬಿ. ಕುಂಜಪ್ಪ | ದಿನಾಂಕ: 15.12.2003 |

**ಪ್ರಸ್ತಾವನೆ:**

ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕಿನಲ್ಲಿ ಅನಧಿಕೃತ ಸಾಗುವಳಿ ಸಕ್ರಮ ಯೋಜನೆಯಲ್ಲಿ ಸ್ಥಿರೀಕರಣ ಕೋರಿ ಬಂದಿದ್ದ ನಮೂನೆ 50ರ ಅರ್ಜಿಗಳನ್ನು ಹೋಬಳಿವಾರು ನಮೂನೆ 51 ರಲ್ಲಿ ನಮೂದಿಸಿದ್ದು ಈ ವಹಿಗಳನ್ನು ದಿನಾಂಕ: 19.03.91ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 13 ಎಲ್‌ಜಿಪಿ 91 ರಂತೆ ನಿರ್ವಹಿಸಿದ್ದರೂ ಸಹ ಅವಧಿ ಮೀರಿದ ನಂತರ ಸ್ವೀಕರಿಸಿದ ಅರ್ಜಿಗಳನ್ನು ಹೊಸದಾಗಿ ಮಧ್ಯೆ ಮಧ್ಯೆ ಬೇರೆ ಬೇರೆ ಕೈಬರಹ ಹಾಗೂ ಇಂಕ್‌ಗಳಲ್ಲಿ ಬರೆದು ಅರ್ಜಿದಾರರ ಹೆಸರುಗಳನ್ನು ಹೊಡೆದು ಹಾಕಿರುವುದು ಹಾಗೂ ಇನ್ನಿತರ ಗುರುತರವಾದ ತಪ್ಪುಗಳಿದ್ದರೂ ಸಹ ಇದನ್ನು ಮೇಲಾಧಿಕಾರಿಗಳ ಗಮನಕ್ಕೆ ತರದೆ ಹೊಸದಾಗಿ ಸೇರಿಸಿರುವ ಅರ್ಜಿಗಳಿಗೆ ಹಾಗೂ ತಿದ್ದುಪಡಿ ಮಾಡಿದ ಅರ್ಜಿದಾರರುಗಳಿಗೆ ಅನೇಕ ಪ್ರಕರಣಗಳಲ್ಲಿ ಮಂಜೂರಾತಿ ನೀಡಿ ನಿಯಮಬಾಹಿರವಾದ ಕ್ರಮಕೈಗೊಂಡು ಕರ್ತವ್ಯಲೋಪ ಎಸಗಿದ ಕಾರಣಕ್ಕಾಗಿ ಇತರರೊಂದಿಗೆ ಈ ಕೆಳಕಂಡ ಅಧಿಕಾರಿ: ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರಮ ಸಂಖ್ಯೆ (1) ಓದಲಾದ ದಿನಾಂಕ: 27.6.1996ರ ಸರ್ಕಾರಿ ಆದೇಶದಲ್ಲಿ ಹಿಂದಿನ ವಿಭಾಗಾಧಿಕಾರಿ, ಮೈಸೂರು ವಿಭಾಗ, ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು;

**ಶ್ರೀಯುತರು:**

1) ನಾಗರಾಜಪ್ಪ ಹೊನ್ನಾಳ, ತಹಶೀಲ್ದಾರ್
2) ಹೆಚ್. ಜಿ. ತಮ್ಮಯ್ಯ, ಕಂದಾಯ ನಿರೀಕ್ಷಕ
3) ಬಿ. ಕುಂಜಪ್ಪ, ಕಂದಾಯ ನಿರೀಕ್ಷಕ
4) ಬಿ. ಕೆ. ಗಜೇಂದ್ರ, ಗ್ರಾಮ ಲೆಕ್ಕಿಗ,
5) ಡಿ. ಸಿ. ಗಂಗಾಧರಪ್ಪ, ಕಂದಾಯ ನಿರೀಕ್ಷಕ
6) ಹೆಚ್. ರಂಗರಾಜು, ಪ್ರಥಮ ದರ್ಜೆ ಸಹಾಯಕರು
7) ಎ. ಪಿ. ಗಣೆಯನಾಯಕ, ದ್ವಿತೀಯ ದರ್ಜೆ ಸಹಾಯಕ
8) ಬಿ. ರಾಜಶೇಖರಪ್ಪ, ಕಂದಾಯ ನಿರೀಕ್ಷಕ
9) ಜಿ. ಎಂ. ಮರುಳಸಿದ್ದಪ್ಪ, ದ್ವಿತೀಯ ದರ್ಜೆ ಸಹಾಯಕ

ಸದರಿ ಆದೇಶದನ್ವಯ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸಿದ ವಿಚಾರಣಾಧಿಕಾರಿಯವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 14.12.2001ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಮೇಲ್ಕಂಡ ಆರೋಪಿತ ಅಧಿಕಾರಿ: ನೌಕರರ ವಿರುದ್ಧದ ಆರೋಪಗಳು ಸಾಬೀತಾಗಿರುವುದಾಗಿ

ವರದಿಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ವಿಚಾರಣಾ ವರದಿಯ ಪ್ರತಿಯೊಂದಿಗೆ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 21.11.2003ರ 2ನೇ ಕಾರಣ ಕೇಳುವ ನೋಟೀಸನ್ನು ಎಲ್ಲಾ ಆಪಾದಿತ ಅಧಿಕಾರಿ: ನೌಕರರಿಗೆ ಜಾರಿಗೊಳಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ವಿವಿಧ ದಿನಾಂಕಗಳಲ್ಲಿ ಆಪಾದಿತ ಅಧಿಕಾರಿ: ನೌಕರರು ತಮ್ಮ ತಮ್ಮ ಲಿಖಿತ ಉತ್ತರಗಳನ್ನು ಸಲ್ಲಿಸಿರುತ್ತಾರೆ. ಅವುಗಳನ್ನು ಪರಿಶೀಲಿಸಲಾಗಿ, ಅವರುಗಳ ವಿರುದ್ಧದ ಆರೋಪಗಳು ಸಾಬೀತಾಗಿರುವುದನ್ನು ಒಪ್ಪಿಕೊಂಡಿರುವುದಿಲ್ಲ ಹಾಗೂ ಅವುಗಳನ್ನು ಸಾರಾಸಗಟಾಗಿ ನಿರಾಕರಿಸಿ ಅವರುಗಳನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಈ ಪ್ರಕರಣದಲ್ಲಿನ ವಿಚಾರಣಾ ವರದಿ ಹಾಗೂ ಆರೋಪಿತ ಅಧಿಕಾರಿ: ನೌಕರರು ಸಲ್ಲಿಸಿರುವ ಲಿಖಿತ ಹೇಳಿಕೆ ಇವುಗಳನ್ನು ದಾಖಲೆಗಳ ಆಧಾರದ ಮೇಲೆ ಪರಿಶೀಲಿಸಲಾಗಿ ಈ ಮೇಲ್ಕಂಡ ಅಧಿಕಾರಿ: ನೌಕರರು ಕರ್ತವ್ಯಚ್ಯುತಿ ಎಸಗಿರುವುದು ಸಾಬೀತಾಗಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 90 ಎಡಿಇ 93 (ಭಾಗ), ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 8 (iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಆರೋಪಿತರಿಗೆ ಅವರ ಹೆಸರಿನ ಮುಂದೆ ಸೂಚಿಸಿರುವ ದಂಡನೆಯನ್ನು ತಕ್ಷಣ ಜಾರಿಗೆ ಬರುವಂತೆ ವಿಧಿಸಿ ಆದೇಶಿಸಿದೆ.

**ಶ್ರೀಯುತರು:**

| | | | |
|---|---|---|---|
| 1) | ನಾಗರಾಜಪ್ಪ ಹೊನ್ನಾಳ, ಹಿಂದಿನ ತಹಶೀಲ್ದಾರ್ ಕಡೂರು ತಾಲ್ಲೂಕು ಹಾಲಿ ತಹಶೀಲ್ದಾರ್, ಬ್ಯಾಡಗಿ ತಾಲ್ಲೂಕು | : | ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಾಗಿ (with cummulative effect) ತಡೆಹಿಡಿದು ಆದೇಶಿಸಿದೆ. |
| 2) | ಹೆಚ್. ಜಿ. ತಮ್ಮಯ್ಯ ಹಿಂದಿನ ಕಂದಾಯ ನಿರೀಕ್ಷಕ ಹಾಲಿ ಶಿರಸ್ತೇದಾರ್, | : | ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಿಲ್ಲದೆ (without cummulative effect) ತಡೆಹಿಡಿದು ಆದೇಶಿಸಿದೆ. |
| 3) | ಬಿ. ಕುಂಜಪ್ಪ, ಹಿಂದಿನ ಕಂದಾಯ ನಿರೀಕ್ಷಕ ಹಾಲಿ ಶಿರಸ್ತೇದಾರ್ | : | -ಅದೇ- |
| 4) | ಬಿ. ಕೆ. ಗಜೇಂದ್ರ, ಗ್ರಾಮ ಲೆಕ್ಕಿಗ | : | -ಅದೇ- |
| 5) | ಡಿ. ಸಿ. ಗಂಗಾಧರಪ್ಪ, ಹಿಂದಿನ ಕಂದಾಯ ನಿರೀಕ್ಷಕ, ಹಾಲಿ ಪ್ರಥಮ ದರ್ಜೆ ಸಹಾಯಕ | : | -ಅದೇ- |
| 6) | ಹೆಚ್.ಆರ್. ರಂಗರಾಜು, ಪ್ರಥಮ ದರ್ಜೆ ಸಹಾಯಕ | : | -ಅದೇ- |
| 7) | ಎ. ಪಿ. ಗಣೆಯನಾಯಕ, ದ್ವಿತೀಯ ದರ್ಜೆ ಸಹಾಯಕ | : | -ಅದೇ- |
| 8) | ಬಿ. ರಾಜಶೇಖರಪ್ಪ, ಹಿಂದಿನ ಕಂದಾಯ ನಿರೀಕ್ಷಕ ಹಾಲಿ ಶಿರಸ್ತೇದಾರ್ | : | -ಅದೇ- |
| 9) | ಜಿ. ಎಂ. ಮರುಳಸಿದ್ದಪ್ಪ, ಹಿಂದಿನ ದ್ವಿತೀಯ ದರ್ಜೆ ಸಹಾಯಕ ಹಾಲಿ ಪ್ರಥಮ ದರ್ಜೆ ಸಹಾಯಕ | : | -ಅದೇ- |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್. 1096

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ಸೇವೆಗಳು-3).

**ವಿಷಯ :** ಶಿಷ್ಟಾಚಾರ ಕಾರ್ಯನಿರ್ವಹಣೆಗಾಗಿ ತಹಶೀಲ್ದಾರ್ (ಗ್ರೇಡ್-2) ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 28 ಎಟಿಎಸ್ 93, ದಿನಾಂಕ: 5.7.1993
2. ಸರ್ಕಾರದ ಆದೇಶ ಸಂಖ್ಯೆ: ಕಂಇ 47 ಎಟಿಎಸ್ 2000, ದಿನಾಂಕ: 24.10.2000
3. ಸರ್ಕಾರದ ಆದೇಶ ಸಂಖ್ಯೆ: ಕಂಇ 21 ಎಟಿಎಸ್ 2001, ದಿನಾಂಕ: 3.6.2001
4. ಸರ್ಕಾರದ ಆದೇಶ ಸಂಖ್ಯೆ: ಕಂಇ 110 ಎಎಸ್‌ಡಿ 2002, ದಿನಾಂಕ: 8.9.2003
5. ಜಿಲ್ಲಾಧಿಕಾರಿಗಳು, ಮೈಸೂರು ಇವರ ಪತ್ರ ಸಂಖ್ಯೆ: ಎಸಿಟಿ (2) ಸಿಆರ್, 93: 2003-04, ದಿನಾಂಕ: 6.4.04
6. ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಇವರ ಪತ್ರ ಸಂಖ್ಯೆ: ಕಂ: ಸಿಬ್ಬಂದಿ-1: 119: 2003-04, ದಿನಾಂಕ: 25.5.04

**ಪ್ರಸ್ತಾವನೆ:**

ಈ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಶಿಷ್ಟಾಚಾರ ಕಾರ್ಯನಿರ್ವಹಣೆಗಾಗಿ ಮೈಸೂರು, ಬೆಳಗಾಂ ಮತ್ತು ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ತಲಾ ಒಂದು ತಹಶೀಲ್ದಾರ್ ಗುಂಪು-ಬಿ ಹುದ್ದೆಯನ್ನು ಸೃಜಿಸಲಾಗಿತ್ತು. ಈ ಹುದ್ದೆಗಳನ್ನು ಕಾಲಕಾಲಕ್ಕೆ ಅವಶ್ಯಕತೆಗನುಗುಣವಾಗಿ ಮುಂದುವರೆಸಲಾಗುತ್ತದೆ. ಈ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 4.7.2002 ರಿಂದ 3.7.03ರ ವರೆಗೆ ಮಾತ್ರ ಮುಂದುವರಿಸಲಾಗಿದೆ.

ಈ ಹುದ್ದೆಗಳನ್ನು ಪುನಃ ಮುಂದುವರೆಸುವಂತೆ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಮತ್ತು ಮೈಸೂರು ಜಿಲ್ಲೆ ಇವರುಗಳು ಕೋರಿದ್ದು, ಸರಕಾರವು ಈ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 110 ಎಎಸ್‌ಡಿ 2002, ಬೆಂಗಳೂರು, ದಿನಾಂಕ: 25ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶಗಳ ಹಿನ್ನೆಲೆಯಲ್ಲಿ, ಮೈಸೂರು ಹಾಗೂ ಗುಲ್ಬರ್ಗಾ ಜಿಲ್ಲಾ ಕೇಂದ್ರದಲ್ಲಿರುವ ತಹಶೀಲ್ದಾರ್ ಗ್ರೇಡ್-2 ಶಿಷ್ಟಾಚಾರ ಹುದ್ದೆಯನ್ನು ದಿನಾಂಕ: 4.7.2003 ರಿಂದ 3.7.2005ರ ವರೆಗೆ ತಾತ್ಕಾಲಿಕವಾಗಿ ಮುಂದುವರಿಸಲು ಸರ್ಕಾರ ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 28.7.2004ರ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಕಂಇ 35452 ಐಎಫ್‌ಎ 2004, ದಿನಾಂಕ: 28.7.2004 ಹಾಗೂ ಸಿಆಸುಇ (ಸಾಮಾನ್ಯ-ಎ) ಅ.ಟಿ. ಸಂಖ್ಯೆ: ಸಿಆಸುಇ 65 ಹೆಚ್‌ಇಟಿ 2004, ದಿನಾಂಕ: 30.8.2004ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್. 1098 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು-3).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಶ್ರೀ ಮುನಿಶಾಮಯ್ಯ, ಕೆಎಎಸ್ (ಕಿ.ಶ್ರೇ) ಅಧಿಕಾರಿ ವಿರುದ್ಧ ಇಲಾಖಾ ವಿಚಾರಣೆ-ಅಧಿಕಾರಿ ಮೃತರಾಗಿರುವುದರಿಂದ ವಿಚಾರಣೆ ಕೈಬಿಟ್ಟು ಮುಕ್ತಾಯಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಪೊಲೀಸ್ ಕಮೀಷನರ್, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಪಿ 15 ಡಿಸಿಪಿಅ/2000 ದಿನಾಂಕ: 5.10.2001.
2. ನೋಟೀಸ್ ಸಂಖ್ಯೆ: ಸಿಆಸುಇ 111 ಎಸ್‌ಇಎನ್ 2000 ದಿನಾಂಕ: 9.1.2002.
3. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 231 ಎಸ್‌ಕೆಟಿ 2002 ದಿನಾಂಕ: 31.5.2003.
4. ಶ್ರೀ ಮುನಿಶಾಮಯ್ಯರವರ ಮರಣ ಪ್ರಮಾಣ ಪತ್ರ ದಿನಾಂಕ: 9.12.2003.

**ಪ್ರಸ್ತಾವನೆ:**

ಶ್ರೀ ಮುನಿಶಾಮಯ್ಯ, ಕೆಎಎಸ್ (ಕಿ.ಶ್ರೇ) ವಿಶೇಷ ಭೂ ಸ್ವಾಧೀನಾಧಿಕಾರಿ, ಬೆಂಗಳೂರು, ಅವರು ಈ ಹಿಂದೆ ಕಾರ್ಯನಿರ್ವಹಿಸುತ್ತಿದ್ದ ಹುದ್ದೆಗಳ ಅಧಿಕಾರಗಳನ್ನು ದುರುಪಯೋಗಪಡಿಸಿಕೊಂಡು ಕೆಲವೊಂದು ಮುಗ್ಧ ಜನರಿಗೆ ಬೆಂಗಳೂರಿನ ಸುತ್ತಮುತ್ತ ನಿವೇಶನ, ಜಮೀನು ಕೊಡಿಸುವ ನೆಪದಲ್ಲಿ ಅವರಿಂದ ಲಕ್ಷಾಂತರ ರೂಪಾಯಿಗಳನ್ನು ಪಡೆದು ಜಮೀನು ಮತ್ತು ನಿವೇಶನಗಳನ್ನು ಕೊಡಿಸದೇ ಹಾಗೂ ಹಣವನ್ನು ಹಿಂದಿರುಗಿಸದೆ ಅವರಿಗೆ ಮೋಸ ಮಾಡಿರುವ ಅನೇಕ ಪ್ರಕರಣಗಳಲ್ಲಿ ಅವರ ವಿರುದ್ಧ ಬೆಂಗಳೂರಿನ ವಿವಿಧ ಪೊಲೀಸ್ ಠಾಣೆಯಲ್ಲಿ ಭಾರತೀಯ ದಂಡ ಸಂಹಿತೆಯ ಕಲಂ 406 ಮತ್ತು 420 ಗಳ ಅಡಿಯಲ್ಲಿ ಪ್ರಕರಣಗಳು ದಾಖಲಾಗಿದ್ದು ಅದರ ಸಂಬಂಧ ನ್ಯಾಯಾಲಯಕ್ಕೆ ಸಲ್ಲಿಸಿರುವ ಆರೋಪ ಪಟ್ಟಿಯಂತೆ ಒಟ್ಟು 8 ಪ್ರಕರಣಗಳಲ್ಲಿ ಕ್ರಿಮಿನಲ್ ಮೊಕದ್ದಮೆಗಳನ್ನು ದಾಖಲು ಮಾಡಿರುವುದು ಮೇಲೆ (1) ರಲ್ಲಿ ಓದಲಾದ ಪೊಲೀಸ್ ಆಯುಕ್ತರ ಪತ್ರ ದಿನಾಂಕ: 5.10.2001 ರಲ್ಲಿ ವರದಿಯಾಗಿದೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3 (i) (iii)ರ ಉಲ್ಲಂಘನೆಗಾಗಿ ಮೇಲೆ (2) ರಲ್ಲಿ ಓದಲಾದ ದಿನಾಂಕ: 9.1.2002ರ ನೋಟೀಸ್ ಜಾರಿ ಮಾಡುವ ಮೂಲಕ ವಿಚಾರಣೆ ಪ್ರಾರಂಭಿಸಲಾಯಿತು. ತದನಂತರ ಮೇಲೆ (3) ರಲ್ಲಿ ಓದಲಾದ ದಿನಾಂಕ: 31.5.2003ರ ಸರ್ಕಾರದ ಆದೇಶದಲ್ಲಿ ಇವರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಯಿತು. ಆದರೆ ಶ್ರೀ ಮುನಿಶಾಮಯ್ಯ ನವರ ವಿರುದ್ಧ ಇದ್ದ ಕ್ರಿಮಿನಲ್ ಮೊಕದ್ದಮೆಗಳು ನ್ಯಾಯಾಲಯಗಳಲ್ಲಿ ಮುಂದುವರೆಯುತ್ತಿದೆ, ಈ ಮಧ್ಯೆ ಮೇಲೆ (4) ರಲ್ಲಿ ಓದಲಾದ ಮರಣ ಪ್ರಮಾಣ ಪತ್ರದಲ್ಲಿನಂತೆ ದಿನಾಂಕ: 30.11.2003 ರಂದು ಶ್ರೀ ಮುನಿಶಾಮಯ್ಯನವರು ದೈವಾಧೀನರಾಗಿರುತ್ತಾರೆ. ಆದ್ದರಿಂದ ಪ್ರಕರಣವನ್ನು ಸರ್ಕಾರವು ಮರು ಪರಿಶೀಲಿಸಿ ಶ್ರೀಯುತರು ಮರಣ ಹೊಂದಿರುವ ಪ್ರಯುಕ್ತ ಮೇಲ್ಕಂಡ ದುರ್ನಡತೆಗೆ ಪ್ರಾರಂಭಿಸಲಾಗಿದ್ದ ಇಲಾಖಾ ವಿಚಾರಣಾ ಪ್ರಕ್ರಿಯೆ ಕುರಿತಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 111 ಎಸ್‌ಇಎನ್ 2000 ಬೆಂಗಳೂರು 22ನೇ ಸೆಪ್ಟೆಂಬರ್ 2004**

ಆರೋಪಿತ ಅಧಿಕಾರಿಯಾದ ಶ್ರೀ ಮುನಿಶಾಮಯ್ಯ, ಕೆಎಎಸ್ (ಕಿ.ಶ್ರೇ) ಅಧಿಕಾರಿ ಇವರು ದಿನಾಂಕ: 30.11.2003 ರಂದು ನಿಧನ ಹೊಂದಿರುವುದರಿಂದ ಅವರ ವಿರುದ್ಧ ಮೇಲೆ (2) ರಲ್ಲಿನ ನೋಟೀಸ್‌ನಲ್ಲಿ ಪ್ರಾರಂಭಿಸಲಾಗಿದ್ದ ಇಲಾಖಾ ವಿಚಾರಣಾ ಪ್ರಕ್ರಿಯೆಯನ್ನು ಕೈಬಿಟ್ಟು, ಮುಕ್ತಾಯಗೊಳಿಸಲಾಗಿದೆ. ಈ ವಿಚಾರಣೆ ನಡೆಯದಿದ್ದಲ್ಲಿ ಇವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅದನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1100 **ಎಚ್. ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ, (ಸೇವೆಗಳು-3).

**ENERGY SECRETARIAT**

**Sub :** Karnataka Electricity Regulatory Commission-Constitution of Selection Committee for Selection of Chairperson of the Commission.

**Preamble:**

The Karnataka Electricity Regulatory Commission constituted as per section 3 of Karnataka Electricity Reform Act 1999 (KER Act 1999) consists of three members including the Chairman. Out these

members, Sri. Phillipose Matthai, will be completing his tenure as Chairman of the Commission on 14th November 2004

Sub-Section (1) of Section 85 of Electricity Act 2003 empowers the State Government to constitute a Selection Committee for the purpose of selection of members including chairperson of the commission.

Hence this Order.

**Government Order No. EN 94 PSR 2004 dated: 30th September 2004**

1. In terms of sub-section (1) of section 85 of Electricity Act 2003, the Government of Karnataka Constitutes the Selection Committee comprising of the following persons as members, for selection of a panel of two names for appointment as Chairperson of the Karnataka Electricity Regulatory Commission.
   1) Mr. Justice Sadashiva, Retired High Court Judge — Chairman
   2) Chief Secretary to Government of Karnataka — Member
   3) Chairman, Central Electricity Authority — Member
2. The Principal Secretary to Government, Energy Department, Bangalore will act as convenor of the Selection Committee.
3. The selection committee shall;
   a) finalize the selection of panel of names for appointment as Chairman, KERC as expeditiously as possible and within 45 days from the date of this order.
   b) recommend a panel of two names to the Government for filling the post of Chairman, KERC.
   c) satisfy itself, before recommending the panel of persons for appointment as Chairman of the Commission, that such person does not have any financial or other interest which is likely to effect prejudicially his functions as chairman of the Commission, in terms of sub-section (5) of section 85 of Electricity Act 2003
4. This Order issues with the approval of competent authority and shall come into force with immediate effect.

By Order and in the Name of the Governor of Karnataka,

PR-1101

**K. L. JAYARAM**

Under Secretary to Government,

Energy Department.

**ಕಂದಾಯ ಸಚಿವಾಲಯ**

**ವಿಷಯ :** ಫೈಯಜುಲ್ ಉಲುಮ್ ಎಜುಕೇಶನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 31 ಮುನೋಸೊ 2001, ದಿನಾಂಕ: 27.2.2004.
2. ಸರ್ಕಾರಿ ಆದೇಶ ಸಂಖ್ಯೆ: ಕಂಇ 31 ಮುನೋಸೊ 2001, ದಿನಾಂಕ: 18.8.2004.
3. ಆಡಳಿತಾಧಿಕಾರಿಗಳು: ಉಪ ವಿಭಾಗಾಧಿಕಾರಿಗಳು, ಬೀದರ್ ರವರ ಪತ್ರ ಸಂಖ್ಯೆ: ಕಂ:ಸಂಕೀ: ಸಿಆರ್:15: 2004-05, ದಿನಾಂಕ: 9.8.04.

**ಪ್ರಸ್ತಾವನೆ:**

ಮೇಲೆ ಓದಲಾದ-(1)ರ ಸರ್ಕಾರಿ ಆದೇಶದಲ್ಲಿ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ, ಈ ಸಂಸ್ಥೆಯ ಆಡಳಿತದ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ ಪ್ರಕಾರ 6 ತಿಂಗಳ ಅವಧಿಗೆ ಉಪ ವಿಭಾಗಾಧಿಕಾರಿಗಳು, ಬೀದರ್ ರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸದರಿ ಅಧಿಕಾರಿಯವರು ಗುಲ್ಬರ್ಗಾದಿಂದ ಸುಮಾರು 120 ಕಿಮೀ. ದೂರದಲ್ಲಿರುವುದರಿಂದ ಸಂಸ್ಥೆಯ ಕಾರ್ಯಕಲಾಪಗಳನ್ನು ನೋಡಿಕೊಳ್ಳಲು ಅನಾನುಕೂಲ ವುಂಟಾಗುತ್ತಿರುವುದರಿಂದ ಮೇಲೆ ಓದಲಾದ-(2)ರ ಸರ್ಕಾರಿ ಆದೇಶದಲ್ಲಿ ಉಪ ವಿಭಾಗಾಧಿಕಾರಿಗಳು, ಬೀದರ್ ರವರ ಬದಲಿಗೆ ಉಪ ವಿಭಾಗಾಧಿಕಾರಿಗಳು, ಗುಲ್ಬರ್ಗಾ ಉಪ ವಿಭಾಗ ರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಆಡಳಿತಾಧಿಕಾರಿ ಅವಧಿಯು ದಿನಾಂಕ: 26.8.2004ಕ್ಕೆ ಮುಕ್ತಾಯಗೊಂಡಿದ್ದು, ಆಡಳಿತಾಧಿಕಾರಿಯವರ ಅವಧಿಯನ್ನು 6 ತಿಂಗಳ ಅವಧಿಗೆ ಮುಂದುವರಿಸುವಂತೆ, ಸದರಿ ಸಂಸ್ಥೆಯ ಆಡಳಿತಾಧಿಕಾರಿಗಳು ಮೇಲೆ ಓದಲಾದ-(3)ರಲ್ಲಿ ಕೋರಿರುತ್ತಾರೆ. ಸದರಿಯವರ ಪತ್ರವನ್ನು ಕೂಲಂಕುಷವಾಗಿ ಪರಿಶೀಲಿಸಿ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಮುನೋಸೊ 2002, ಬೆಂಗಳೂರು ದಿನಾಂಕ: 23ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ ಪ್ರಕಾರ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ, ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ: 27.8.2004 ರಿಂದ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ಅವಧಿಯಲ್ಲಿ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ ಖಡ್ಡಾಯವಾಗಿ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1103

**ಎಸ್. ಜಿ. ನಾರಾಯಣ**

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ :** ರವೀಂದ್ರ ಕಲಾಕ್ಷೇತ್ರಕ್ಕೆ ಕೇಂದ್ರ ಸೇವಾ ತೆರಿಗೆ ವಿನಾಯಿತಿ ಕೋರಿ-ಠೇವಣಿ ಹಣ ಬಿಡುಗಡೆ ಕುರಿತು.

**ಓದಲಾಗಿದೆ :** 1. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ: ಕಸಇ:ರಕ:6/2003 ದಿನಾಂಕ: 27.8.2004.

**ಪ್ರಸ್ತಾವನೆ:**

ಮೇಲೆ ಉಲ್ಲೇಖದಲ್ಲಿ ಓದಲಾದ ದಿನಾಂಕ: 27.8.2004ರ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರು ಕೇಂದ್ರ ಸೇವಾ ತೆರಿಗೆ ವಿಭಾಗದ ಅಸಿಸ್ಟೆಂಟ್ ಕಮೀಷನರ್, ಬೆಂಗಳೂರು ಇವರ ಆದೇಶ ದಿನಾಂಕ: 16.10.2003ರಲ್ಲಿ ರವೀಂದ್ರ ಕಲಾಕ್ಷೇತ್ರಕ್ಕೆ ದಿನಾಂಕ: 1.7.97 ರಿಂದ ದಿನಾಂಕ: 31.3.2003 ರವರೆಗೆ ಪೂರ್ವಾನ್ವಯವಾಗಿ ನಿಯಮಾನುಸಾರ ಬಡ್ಡಿ ಹಾಗೂ ದಂಡವಾಗಿ ಒಟ್ಟು ರೂ. 2,21,133/- ಗಳನ್ನು ಪಾವತಿಸಲು ಆದೇಶಿಸಿದ್ದು, ಸದರಿ ಆದೇಶದ ವಿರುದ್ಧ ಅಪಲೇಟ್ ಟ್ರಿಬ್ಯೂನಲ್, ಬೆಂಗಳೂರು ಇಲ್ಲಿ ದಿನಾಂಕ: 9.6.2004 ರಂದು ಮೇಲ್ಮನವಿ ಸಲ್ಲಿಸಲಾಗಿದೆ. ದಿನಾಂಕ: 6.8.2004 ರಂದು ವಿಚಾರಣೆಯನ್ನು ನಡೆಸಿದ ಅಪಲೇಟ್ ಟ್ರಿಬ್ಯುನಲ್, ರವೀಂದ್ರ ಕಲಾಕ್ಷೇತ್ರದಂತಹ ಸಾಂಸ್ಕೃತಿಕ ರಂಗಮಂದಿರಗಳು "ಮಂಟಪ ನಿರ್ವಾಹಕರು" ಎಂಬ ಸೇವಾ ಶೀರ್ಷಿಕೆಯಡಿ ಬರುತ್ತದೆಯೋ ಇಲ್ಲವೋ ಎಂಬ ಬಗ್ಗೆ ದಿನಾಂಕ: 13.10.2004 ರಂದು ಸವಿವರವಾಗಿ ವಿಚಾರಣೆ ಮಾಡಿ ಪರಿಶೀಲಿಸಲಾಗುವುದೆಂದು ತಿಳಿಸುತ್ತಾ, ಅಲ್ಲಿಯವರೆಗೆ ಸೇವಾ ತೆರಿಗೆ ರೂ. 1,01.133 ಅದಕ್ಕೆ ತಗಲುವ ಬಡ್ಡಿ ಹಾಗೂ ದಂಡ ಪಾವತಿಸುವುದಕ್ಕೆ ತಡೆ ಆಜ್ಞೆ ನೀಡಿರುತ್ತದೆ ಹಾಗೂ ದಿನಾಂಕ: 13.10.2004ರ ಒಳಗಾಗಿ ರೂ. 50,000/- (ಐವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಠೇವಣಿಯಾಗಿಡಲು ಆದೇಶಿಸಿರುತ್ತದೆ. ಒಂದು ವೇಳೆ ಠೇವಣಿ ಹಣ ಇಡಲು ವಿಫಲವಾದಲ್ಲಿ ತಡೆ ಆಜ್ಞೆ ತೆರವಾಗಿ, ಮೇಲ್ಮನವಿ ವಜಾ ಆಗಿ ವಿಧಿಸಿದ ಒಟ್ಟು ಸೇವಾ ತೆರಿಗೆ ಹಾಗೂ ದಂಡ ಹಣವನ್ನು ಪಾವತಿ ಮಾಡಬೇಕಾಗುತ್ತದೆ ಎಂದು ವರದಿ ಮಾಡಿರುತ್ತಾರೆ. ಆದುದರಿಂದ ರೂ. 50,000/- ಗಳನ್ನು ಅಪಲೇಟ್ ಟ್ರಿಬ್ಯುನಲ್‌ನಲ್ಲಿ ಠೇವಣಿಯಾಗಿಡಲು ಲೆಕ್ಕಶೀರ್ಷಿಕೆ 2205-00-800-0-01-200 (ಯೋಜನೇತರ) ಪುರಸ್ಕೃತ ರವೀಂದ್ರ ಕಲಾಕ್ಷೇತ್ರ ನಿರ್ವಹಣೆಯಡಿ ಮಂಜೂರು ಮಾಡಿ ಆದೇಶ ಹೊರಡಿಸಲು ಪರಿಶೀಲನಾ ಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 112 ಕಸನಿ 2002 ಬೆಂಗಳೂರು (ಭಾಗ) ದಿನಾಂಕ: 28ನೇ ಸೆಪ್ಟೆಂಬರ್ 2004**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಕೇಂದ್ರ ಸೇವಾ ತೆರಿಗೆ ವಿಭಾಗದ ಅಪಲೇಟ್ ಟ್ರಿಬ್ಯುನಲ್ ಬೆಂಗಳೂರು, ಇಲ್ಲಿ ರವೀಂದ್ರ ಕಲಾಕ್ಷೇತ್ರಕ್ಕೆ ವಿಧಿಸಿದ ಸೇವಾ ತೆರಿಗೆ ಬಡ್ಡಿ ಹಾಗೂ ದಂಡನೆ ಹಣಕ್ಕೆ ಪ್ರತಿಯಾಗಿ ಠೇವಣಿಯಾಗಿಡಲು ರೂ. 50,000/- (ಐವತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರು, ಬೆಂಗಳೂರು ಇವರಿಗೆ ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-800-0-01-200 (ಯೋಜನೇತರ) ಪುರಸ್ಕೃತ ರವೀಂದ್ರ ಕಲಾಕ್ಷೇತ್ರ ನಿರ್ವಹಣೆಯಡಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1108

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತಕ್ಕೆ ನಿರ್ಜೀವ ಮತ್ತು ಒಣಗಿದ ಬೊಂಬುಗಳನ್ನು ಸರಬರಾಜು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 11 ಎಫ್‌ಡಿಪಿ 2004, ದಿನಾಂಕ: 16.3.2004

2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಪತ್ರ ಸಂಖ್ಯೆ: ಎ7:ಬೊಂಬು:ಸಿಆರ್:280:2000-01, ದಿನಾಂಕ: 26.7.2004.

**ಪ್ರಸ್ತಾವನೆ:**

ಉಲ್ಲೇಖ (1)ರ ಸರ್ಕಾರಿ ಆದೇಶ ಸಂಖ್ಯೆ: ಅಪಜೀ 11 ಎಫ್‌ಡಿಪಿ 2004, ದಿನಾಂಕ 16.3.2004 ರಲ್ಲಿ ಸರ್ಕಾರವು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ ಇವರಿಗೆ ಕೊಪ್ಪ ವಿಭಾಗದಿಂದ 5000 ಮೆಟ್ರಿಕ್ ಟನ್‌ಗಳಷ್ಟು ಒಣಗಿದ, ಹೂಬಿಟ್ಟ

ಬೊಂಬುಗಳನ್ನು ಕತ್ರಾವಣೆ ಮಾಡಿ ಮೈಸೂರು ಕಾಗದ ಕಾರ್ಖಾನೆ ನಿಯಮಿತ ಇವರಿಗೆ ಜೂನ್ 2004 ರೊಳಗಾಗಿ ಸರಬರಾಜು ಮಾಡಲು ಆದೇಶಿಸಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ, ಇವರು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಪತ್ರ ಬರೆದು, ನಿಗದಿತ ಪ್ರಮಾಣದ ಬೊಂಬನ್ನು ಕತ್ರಾವಣೆ ಮಾಡುವ ಕಾರ್ಯವನ್ನು ಜೂನ್ 2004 ರೊಳಗಾಗಿ ಪೂರ್ಣಗೊಳಿಸಿರುವುದಾಗಿ ತಿಳಿಸಿ, ಜೂನ್ 2004 ರೊಳಗಾಗಿ ಕೇವಲ 2104 ಮೆ.ಟನ್ ಬೊಂಬನ್ನು ಮಾತ್ರ ಸಾಗಾಣಿಕೆ ಮಾಡಲಾಯಿತೆಂದು ತಿಳಿಸುತ್ತಾ, ಮೇ 2004 ರಲ್ಲಿ ಆಕಸ್ಮಿಕವಾಗಿ ಮಳೆ ಪ್ರಾರಂಭವಾದುದರಿಂದ ಪೂರ್ಣವಾಗಿ ಬೊಂಬನ್ನು ಸಾಗಾಣಿಕೆ ಮಾಡಲು ಸಾಧ್ಯವಾಗಲಿಲ್ಲವೆಂದು, ಉಳಿಕೆ ಪ್ರಮಾಣದ ಬೊಂಬನ್ನು ಸಾಗಾಣಿಕೆ ಮಾಡಲು ಡಿಸೆಂಬರ್ 2004ರ ಅಂತ್ಯದವರೆಗೆ ಕಾಲಾವಕಾಶವನ್ನು ವಿಸ್ತರಿಸಿ ಕೊಡಲು ಕೋರಿರುವ ಬಗ್ಗೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಎಫ್.ಐ.ಸಿಯ ಪ್ರಸ್ತಾವನೆಯನ್ನು ಅನುಮೋದಿಸಿ ಕಾಲಾವಕಾಶವನ್ನು ಡಿಸೆಂಬರ್ 2004ರ ಅಂತ್ಯದವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 11 ಎಫ್‌ಡಿಪಿ 2004 ಬೆಂಗಳೂರು ದಿನಾಂಕ: 30ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕೆ ನಿಗಮ ನಿಯಮಿತ, ಇವರಿಗೆ ಕೊಪ್ಪ ವಿಭಾಗದಿಂದ, ಈಗಾಗಲೇ ಕತ್ರಾವಣೆ ಮಾಡಿದ 5000 ಮೆ. ಟನ್‌ನಲ್ಲಿ, ಜೂನ್ ಅಂತ್ಯದವರೆಗೆ ಸಾಗಾಣಿಕೆ ಮಾಡಿದ 2104 ಮೆ.ಟನ್. ಬೊಂಬನ್ನು ಹೊರತುಪಡಿಸಿ, ಉಳಿದ 2896 ಮೆ.ಟನ್ ಬೊಂಬನ್ನು ಸಾಗಾಣಿಕೆ ಮಾಡಲು ಡಿಸೆಂಬರ್ 2004ರ ಅಂತ್ಯದವರೆಗೆ ಕಾಲಾವಕಾಶವನ್ನು ವಿಸ್ತರಿಸಿ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1114

**ಕೆ. ವಿ. ಜಯಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಶುಶ್ರೂಷಾ ದಾದಿಯರ ಪರೀಕ್ಷೆ ಶುಲ್ಕ ಮತ್ತು ಸಂಭಾವನೆಯ ಪರಿಷ್ಕರಣೆ.

**ಓದಲಾಗಿದೆ :**
1. ತಾ: 7.6.2000 ಸಂಖ್ಯೆ: ಆಕುಕ 126 ಎಂಎಂಇ 95ರ ಸರ್ಕಾರಿ ಆದೇಶ
2. ತಾ: 6.12.2003 ಸಂಖ್ಯೆ: ಆಕುಕ 20 ಎಂಎಂಇ 2003ರ ಸರ್ಕಾರಿ ಪತ್ರದಲ್ಲಿ ಅಂತ್ಯಗೊಂಡ ಪತ್ರ ವ್ಯವಹಾರ.
3. ತಾ: 4.8.2003 ಸಂಖ್ಯೆ: D.O. No. Pr. AG (Au) I/OAD Spl. Cell/E/03-04/131 Sr. Deputy Accountant General (I-Civil) ರವರ ಪತ್ರ.
4. ತಾ: 23.6.2003 ಸಂಖ್ಯೆ: ಕರಾಶುಪಮ: 24:2003-04ರ ಕರ್ನಾಟಕ ರಾಜ್ಯ ಶುಶ್ರೂಷಾ ಪರೀಕ್ಷಾ ಮಂಡಳಿ ಪತ್ರ.

**ಪೀಠಿಕೆ:**

1. ಜನರಲ್ ನರ್ಸಿಂಗ್ ಮತ್ತು ಮಿಡ್‌ವೈಫರಿ, ಡಿಪ್ಲೊಮೋಕೋರ್ಸುಗಳ ಪರೀಕ್ಷಾ ಶುಲ್ಕ ಮತ್ತು ವಿವಿಧ ಅಧಿಕಾರಿಗಳಿಗೆ ನೌಕರರಿಗೆ, ಮುದ್ರಣ ವೆಚ್ಚ ಇತ್ಯಾದಿಗಳಿಗೆ ತಾ: 7.6.2000ದ ಸರ್ಕಾರಿ ಆದೇಶದಲ್ಲಿ ಒಟ್ಟು ವಸೂಲಾದ ಪರೀಕ್ಷಾ ಶುಲ್ಕದಲ್ಲಿ ಶೇಕಡಾವಾರು ಸಂಭಾವನೆಯನ್ನು ನಿಗದಿಪಡಿಸಲಾಗಿರುತ್ತದೆ. ಈ ಹಿಂದೆ ಒಟ್ಟು ಪರೀಕ್ಷಾ ಶುಲ್ಕ ಕಡಿಮೆ ಇತ್ತು ಇತ್ತೀಚಿನ ವರ್ಷಗಳಲ್ಲಿ ಹೆಚ್ಚಿನ ಪರೀಕ್ಷಾ ಶುಲ್ಕ ವಸೂಲು ಆಗುತ್ತಿದ್ದು, ಶೇಕಡಾವಾರು ದರದಲ್ಲಿ ಪರೀಕ್ಷಾ ನಿಯಂತ್ರಣ ಬೋರ್ಡಿನ ಅಧಿಕಾರಿಗಳಿಗೆ ಅತೀ ಹೆಚ್ಚು ಸಂಭಾವನೆ ಪಾವತಿಯಾಗುತ್ತಿದೆ. ಈ ಕಾರಣದಿಂದ ಶೇಕಡಾವಾರು ಸಂಭಾವನೆ ಬದಲು ನಿರ್ದಿಷ್ಟಗೌರವ ಧನವನ್ನು ನಿಗದಿಪಡಿಸುವುದು ಸೂಕ್ತ ಎಂದು ಸರ್ಕಾರಕ್ಕೆ ಕಂಡು ಬಂದಿದೆ. ತತ್‌ಫಲವಾಗಿ ಉಳಿಯುವ ಹಣವನ್ನು ಸರ್ಕಾರಕ್ಕೆ ಎರಡುಬಾರಿ Non-Tax Revenue ಸ್ವರೂಪದಲ್ಲಿ ಜಮಾ ಮಾಡಿಸಿದಲ್ಲಿ ಸರ್ಕಾರದ ಆದಾಯ ಹೆಚ್ಚಿಸಬಹುದಾಗಿದೆ.

2. ಈಗಿರುವ ಶೇಕಡವಾರು ಪದ್ಧತಿಯನ್ನು ವಿಶ್ಲೇಷಿಸಿ Reasonable and Rational ನೀತಿಯನ್ನು ರೂಪಿಸಿ ಅದನ್ನು ಸರಿಪಡಿಸುವ ಸಲುವಾಗಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಹಾಗೂ ಮಂಡಳಿಯ ಅಧ್ಯಕ್ಷರನ್ನು 1995ನೇ ಸಾಲಿನಿಂದ 2002-03ನೇ ಸಾಲಿನವರೆಗೆ ನಡೆದ ಪ್ರತಿಯೊಂದು ಪರೀಕ್ಷೆಯಲ್ಲಿ ಪ್ರತಿಯೊಬ್ಬ ಅಧಿಕಾರಿ ಮತ್ತು ನೌಕರರಿಗೆ ನೀಡಿದ ಸಂಭಾವನೆ ಮತ್ತು ಪರೀಕ್ಷಕರಿಗೆ ನೀಡಿದ ಸಂಭಾವನೆಯನ್ನು ಹಾಗೂ ಸಂಗ್ರಹಿಸಿದ ಪ್ರತಿಯೊಂದು ಪರೀಕ್ಷೆಯ ಪರೀಕ್ಷಾ ಶುಲ್ಕದ ಮೊತ್ತವನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಹಾಗೂ KSNC ಮತ್ತು PMB ಯ ಲೆಕ್ಕ ಪರಿಶೋಧನೆಯನ್ನು ಯಾರು ಯಾವ ರೀತಿಯಲ್ಲಿ ಮಾಡುತ್ತಿದ್ದಾರೆ ಮತ್ತು ಎಲ್ಲಿಯವರೆಗೆ ಲೆಕ್ಕಪರಿಶೋಧನೆ ನಡೆದಿದೆ ಎಂಬುದನ್ನು ವಿವರವಾಗಿ ಸರ್ಕಾರಕ್ಕೆ ವರದಿ ಸ್ವರೂಪದಲ್ಲಿ ಕಳುಹಿಸುವಂತೆ ಕೋರಲಾಗಿತ್ತು. ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ವ್ಯಕ್ತಪಡಿಸಿಲ್ಲ.

3) ಜನರಲ್ ನರ್ಸಿಂಗ್ ಮತ್ತು ಮಿಡ್‌ವೈಫರಿ, ಡಿಪ್ಲೊಮೋ ಕೋರ್ಸುಗಳ ಪರೀಕ್ಷಾ ಶುಲ್ಕದಲ್ಲಿ ವಿವಿಧ ಅಧಿಕಾರಿಗಳಿಗೆ, ನೌಕರರಿಗೆ ಒಟ್ಟು ಗೌರವಧನವನ್ನು ಶೇಕಡಾವಾರು ಪಾವತಿಸುವುದನ್ನು ಪರಿಷ್ಕರಿಸಿ ನಿಗದಿಪಡಿಸುವವರೆಗೆ ಸ್ಥಗಿತಗೊಳಿಸಲು ಸರ್ಕಾರ ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 536 ಎಂಎಂಇ 2004, ಬೆಂಗಳೂರು ದಿನಾಂಕ: 14ನೇ ಸೆಪ್ಟೆಂಬರ್ 2004**

4) ತಾ: 7.6.2000 ಸಂಖ್ಯೆ: ಆಕುಕ 126 ಎಂಎಂಇ 95ರ ಸರ್ಕಾರಿ ಆದೇಶದಲ್ಲಿ ಜನರಲ್ ನರ್ಸಿಂಗ್ ಮತ್ತು ಮಿಡ್‌ವೈಫರಿ, ಡಿಪ್ಲೊಮೋ ಕೋರ್ಸುಗಳ ಪರೀಕ್ಷಾ ಶುಲ್ಕದಲ್ಲಿ ವಿವಿಧ ಅಧಿಕಾರಿಗಳಿಗೆ: ನೌಕರರಿಗೆ ಗೌರವಧನವನ್ನು ಶೇಕಡಾವಾರು ಪಾವತಿಸುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸ್ಥಗಿತಗೊಳಿಸಲಾಗಿದೆ.

5) ಮೇಲ್ಕಂಡ ಸಂಭಾವನೆಯನ್ನು ಪರಿಷ್ಕರಿಸಿ ನಿಗದಿತಗೌರವಧನ ನಿಗದಿಪಡಿಸುವ ಸಲುವಾಗಿ ತತ್‌ಕ್ಷಣ ಸಮಗ್ರ ಪ್ರಸ್ತಾವನೆ ಸಲ್ಲಿಸುವಂತೆ ಕರ್ನಾಟಕ ನರ್ಸಿಂಗ್ ಪರೀಕ್ಷಾ ಮಂಡಳಿಯ ಅಧ್ಯಕ್ಷರು ಮತ್ತು ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1115

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

## FOREST, ENVIRONMENT AND ECOLOGY SECRETARIAT

**Sub :** Gifting of a female Elephant from Sri Chamarajendra Zoological Gardens, Mysore to Yerevan Zoo, Armenia reg.

**Read :**
1. Letter No. MSY/ 1-42/ Gift/2004/397, dated: 13.07.2004 & 28.09.2004 from Chief Conservator of Forests & Member Secretary, Zoo Authority of Karnataka, Mysore.
2. Letter No. C1/CWL-CR-15/2004-05, dated: 16/17.7.2004 from Principal Chief Conservator of Forests (Wildlife), Bangalore.

**Preamble:**

In the letter dated 13.7.2004 and 28.09.2004 read at (1) above the Chief Conservator of Forests & Member Secretary, Zoo Authority of Karnataka, Mysore has stated that, Member Secretary, Central Zoo Authority, New Delhi in the letter dated: 15.4.2004 has written that the Ministry of External Affairs has informed that a Captive born elephant of six to eight years of age has to be gifted to the President of Armenia. It is also stated that Mysore Zoo can spare a female elephant by name 'Komala' born in the Zoo, and aged about 71/2 years and the same has been informed to the Member Secretary, Central Zoo Authority with a request to arrange for exchange of some animals of importance for Mysore zoo in return. Further, he has stated that this matter was placed in the 95th Governing Council Meeting of Zoo Authority of Karnataka held on 26.6.2004 Governing Council has agreed to the proposal of sparing a female elephant 'Komala' by Mysore zoo to be gifted to the President of Armenia and to write to Government for permission. Accordingly he has requested the Government for sparing a captive born female elephant 'Komala' to be gifted to the President of Armenia.

In the letter dated: 16/17.7.2004 read at (2) above, the Principal Chief Conservator of Forest (Wildlife) Bangalore has recommended to Government to give the permission as the above matter has been resolved in the meeting of Zoo Authority held on 26.6.2004

The Proposal has been examined in detail and the following order are issued.

**Government Order No. FEE 141 FWL 2004, Bangalore dated: 4th October 2004**

Sanction of Government is hereby accorded to spare the elephant 'KOMALA' from Mysore Zoo to Armenia as gift on behalf of Government of India.

By order and in the name of the Governor of Karnataka,

PR-1118

**S. R. VATSALA**

Under Secretary to Government,

Forest, Environment & Ecology Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ಸಹ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸಸಿವಿ 97 ದಿನಾಂಕ: 4.7.1997.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 27 ಸಸಿವಿ 98 ದಿನಾಂಕ: 14.7.1998.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 26 ಸಸಿವಿ 99 ದಿನಾಂಕ: 5.7.1999
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 26 ಸಸಿವಿ 99 ದಿನಾಂಕ: 30.10.2000
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 50 ಸಸಿವಿ 2003 ದಿನಾಂಕ: 23.7.2003
6. ಸರ್ಕಾರದ ಉಪ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಎ) ಇವರ ಕಡತ ಸಂಖ್ಯೆ: ಲೋಇ 391 ಸೇಸೆಎ 2004.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯಲ್ಲಿ ತಾಂತ್ರಿಕ ವಿಷಯಗಳನ್ನು ನಿರ್ವಹಿಸಲು ಅನುಕೂಲವಾಗುವಂತೆ ಸಹ ಕಾರ್ಯದರ್ಶಿ ಹುದ್ದೆಯೊಂದನ್ನು ಕೆಳಕಂಡ ತಾಂತ್ರಿಕ

ಸಿಬ್ಬಂದಿ ವರ್ಗದೊಡನೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ, ಹಾಗೂ ಈ ಹುದ್ದೆಯು ಅಸ್ಥಿತ್ವದಲ್ಲಿರುವವರೆಗೂ ಮುಖ್ಯ ಅಭಿಯಂತರರು (ಸಂಪರ್ಕ ಮತ್ತು ಕಟ್ಟಡ) (ಉತ್ತರ) ಧಾರವಾಡ ಇವರ ಅಧೀನದಲ್ಲಿರುವ ಅಧೀಕ್ಷಕ ಅಭಿಯಂತರರು (ವಿನ್ಯಾಸ) ಹುದ್ದೆ ಹಾಗೂ ಮುಖ್ಯ ಅಭಿಯಂತರರು (ಸಂಪರ್ಕ ಮತ್ತು ಕಟ್ಟಡ) (ದಕ್ಷಿಣ) ಬೆಂಗಳೂರು ಹುದ್ದೆ ಹಾಗೂ ಮುಖ್ಯ ಅಭಿಯಂತರರು ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು ಇಲ್ಲಿನ ತಾಂತ್ರಿಕ ಸಿಬ್ಬಂದಿ ವರ್ಗದ ಹುದ್ದೆಗಳು ಇವುಗಳನ್ನು ತುಂಬದೆ ನಿಲಂಬನೆಯಲ್ಲಿಡಲು ಆದೇಶಿಸಲಾಗಿದೆ. ಸಹ ಕಾರ್ಯದರ್ಶಿ ಹುದ್ದೆಯನ್ನು ಹಾಗೂ ತಾಂತ್ರಿಕ ಸಿಬ್ಬಂದಿ ವರ್ಗದ ಹುದ್ದೆಗಳನ್ನು ಪುನರ್ ಅಭಿನಿಯೋಜನೆಯ ಮೂಲಕ ಭರ್ತಿ ಮಾಡಲು ಸಹ ಸದರಿ ಆದೇಶದಲ್ಲಿ ತಿಳಿಸಲಾಗಿದೆ.

1. ಅಧೀನ ಕಾರ್ಯದರ್ಶಿ (ಸಹಾಯಕ ಕಾರ್ಯಪಾಲಕ ಅಭಿಯಂತರರು) - 2 ಹುದ್ದೆಗಳು
2. ಸಹಾಯಕ ಅಭಿಯಂತರರು - 4 ಹುದ್ದೆಗಳು
3. ಕಿರಿಯ ಅಭಿಯಂತರರು - 2 ಹುದ್ದೆಗಳು
4. ಕಿರಿಯ ಸಹಾಯಕ: ದ್ವಿತೀಯ ದರ್ಜೆ ಸಹಾಯಕ - 2 ಹುದ್ದೆಗಳು
5. ಬೆರಳಚ್ಚುಗಾರರು - 2 ಹುದ್ದೆಗಳು
6. ದಲಾಯತ್ - 2 ಹುದ್ದೆಗಳು

ನಂತರ ಕ್ರಮ ಸಂಖ್ಯೆ (2) ರಿಂದ (5) ರವರೆಗೆ ಓದಲಾಗಿರುವ ಆದೇಶಗಳಲ್ಲಿ ಈ ಹುದ್ದೆಗಳನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದ್ದು, ಅಂತಿಮವಾಗಿ ವಿಸ್ತರಿಸಲಾದ ಅವಧಿಯು ದಿನಾಂಕ: 3.7.2004ಕ್ಕೆ ಮುಕ್ತಾಯಗೊಂಡಿರುತ್ತದೆ.

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಎ) ಇವರು ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಕಡತದಲ್ಲಿ ಈ ಎಲ್ಲಾ ಹುದ್ದೆಗಳನ್ನು ದಿನಾಂಕ: 4.7.2004 ರಿಂದ 3.7.2005 ರವರೆಗೆ ಮುಂದುವರೆಸುವ ಅಗತ್ಯತೆ ಇರುವುದರಿಂದ ಈ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 70 ಸಸಿವಿ 2004, ಬೆಂಗಳೂರು, ದಿನಾಂಕ: 4ನೇ ಅಕ್ಟೋಬರ್ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಲೋಕೋಪಯೋಗಿ ಇಲಾಖೆಯ ಸಹ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಈಗಿರುವ ಷರತ್ತುಗಳ ಆಧಾರದ ಮೇಲೆ ದಿನಾಂಕ: 4.7.2004 ರಿಂದ 3.7.2005 ರವರೆವಿಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.96 ರಲ್ಲಿ ಸಹಮತಿ ನೀಡಿರುವುದೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1119

**ಹೆಚ್. ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ, (ಸೇವೆಗಳು-2).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ :** ರಾಷ್ಟ್ರೀಯ ಕೃಷಿ ವಿಮಾ ಯೋಜನೆಯನ್ನು 2004-05ರ ಹಿಂಗಾರು ಹಂಗಾಮಿನಲ್ಲಿ ಹತ್ತಿ ಬೆಳೆಯ ಘೋಷಣೆ ಬಗ್ಗೆ-ಆದೇಶಗಳು.

**ಓದಲಾಗಿದೆ :**
1. ಸರ್ಕಾರದ ಆದೇಶದ ಸಂಖ್ಯೆ: ಕೃತೋಇ-155/ಕೃಉಇ/98(ಪಿ) 2000 ದಿನಾಂಕ: 11.5.2000.
2. ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿ ಸಭೆಯ ದಿನಾಂಕ: 15.04.2004ರ ನಡವಳಿಗಳು.
3. ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿ ಸಭೆಯ ದಿನಾಂಕ: 17.08.2004ರ ನಡವಳಿಗಳು.
4. ಕೃಷಿ ಆಯುಕ್ತರ ಪತ್ರದ ಸಂಖ್ಯೆ: ಬೆವಿಘ:ರಾಕೃವಿಯೋ:ಮುಂ-04.ಅ.ಸೂ/ಹಿಂ.ಹತ್ತಿ/2004 ದಿನಾಂಕ:31.08.04.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರಲ್ಲಿನ ಸರ್ಕಾರಿ ಆದೇಶದನ್ವಯ 2000ನೇ ಸಾಲಿನ ಮುಂಗಾರು ಹಂಗಾಮಿನಿಂದ ರಾಷ್ಟ್ರೀಯ ಕೃಷಿ ವಿಮಾ ಯೋಜನೆಯನ್ನು ಕರ್ನಾಟಕ ರಾಜ್ಯದಲ್ಲಿ ಘೋಷಿಸಿದ ಬೆಳೆಗಳು ಮತ್ತು ತಾಲ್ಲೂಕುಗಳಿಗೆ ಅನುಷ್ಠಾನಗೊಳಿಸಲು ಅಧಿಸೂಚನೆ ಹೊರಡಿಸಲಾಗಿದೆ.

ದಿನಾಂಕ: 15.04.2004ರಂದು ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಜರುಗಿದ ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿ ಸಭೆಯಲ್ಲಿ 2004-05ರ ಹಿಂಗಾರು ಹಂಗಾಮಿನಲ್ಲಿ ಆಗಸ್ಟ್, ಸೆಪ್ಟೆಂಬರ್ ಮತ್ತು ಅಕ್ಟೋಬರ್ ಮಾಹೆಗಳಲ್ಲಿ ಬಿತ್ತಿದ ಹತ್ತಿ ಬೆಳೆಯನ್ನು ಹಿಂಗಾರು ಬೆಳೆ ಎಂದು ಪರಿಗಣಿಸಿ, ಬೆಳೆ ಸಾಲ ಪಡೆಯದ ರೈತರಿಗೆ ಯೋಜನೆಯಡಿ ಪಾಲ್ಗೊಳ್ಳಲು ಕೊನೆಯ ದಿನಾಂಕವನ್ನು 31ನೇ ಅಕ್ಟೋಬರ್ 2004 ಎಂದು ನಿಗದಿಪಡಿಸಿ ಅಧಿಸೂಚಿಸಲು ತೀರ್ಮಾನಿಸಲಾಗಿತ್ತು. ಆದರೆ, ದಿನಾಂಕ: 17.08.2004 ರಂದು ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಜರುಗಿದ ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿ ಸಭೆಯಲ್ಲಿ ಮುಂಗಾರು ಹಂಗಾಮಿನಲ್ಲಿ ಅಧಿಸೂಚಿಸಲಾದ ಹತ್ತಿ ಬೆಳೆಯು ಹಾಗೂ ಆಗಸ್ಟ್ ಮಾಹೆಯಲ್ಲಿ ಬಿತ್ತಿದ ಹಿಂಗಾರು ಹತ್ತಿ ಬೆಳೆಯು ಒಂದೇಬಾರಿಗೆ ಕಟಾವಿಗೆ ಬರುವುದರಿಂದ ಕ್ಷೇತ್ರಮಟ್ಟದಲ್ಲಿ ತೊಂದರೆಯುಂಟಾಗುತ್ತದೆಂದು ಸೆಪ್ಟೆಂಬರ್ ಮತ್ತು ಅಕ್ಟೋಬರ್ ಮಾಹೆಗಳಲ್ಲಿ ಬಿತ್ತಿದ ಹತ್ತಿ ಬೆಳೆಯನ್ನು ಹಿಂಗಾರು ಬೆಳೆ ಎಂದು ಪರಿಗಣಿಸಿ, ಬೆಳೆ ಸಾಲ ಪಡೆಯದ ರೈತರಿಗೆ

ಯೋಜನೆಯಡಿ ಪಾಲ್ಗೊಳ್ಳಲು ಕೊನೆಯ ದಿನಾಂಕವನ್ನು 31ನೇ ಅಕ್ಟೋಬರ್ 2004 ಎಂದು ನಿಗದಿಪಡಿಸಿ ಅಧಿಸೂಚಿಸಲು ತೀರ್ಮಾನಿಸಲಾಗಿದೆ.

ಅದರಂತೆ, ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ ಇವರು ಹತ್ತಿ (ನೀರಾವರಿ) ಬೆಳೆಯನ್ನು 2 ಹೋಬಳಿಗಳಲ್ಲಿ ಹಾಗೂ ಹತ್ತಿ (ಮಳೆ ಆಶ್ರಿತ) ಬೆಳೆಯನ್ನು 48 ಹೋಬಳಿಗಳಲ್ಲಿ ಹೋಬಳಿ ಮಟ್ಟಕ್ಕೆ ಅಳವಡಿಸಿ ಅಧಿಸೂಚಿಸಲು ಪ್ರಸ್ತಾಪಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (4)ರಲ್ಲಿ ಕೃಷಿ ಆಯುಕ್ತರು, ಬೆಂಗಳೂರು ಇವರು ರಾಜ್ಯಮಟ್ಟದ ಬೆಳೆ ವಿಮಾ ಸಮನ್ವಯ ಸಮಿತಿ ಸಭೆಯ ತೆಗೆದುಕೊಂಡ ತೀರ್ಮಾನದಂತೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿ ಸೂಕ್ತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶವನ್ನು ನೀಡಲಾಗಿದೆ.

**ಸರ್ಕಾರದ ಆದೇಶದ ಸಂಖ್ಯೆ: ಕೃತೋಇ:392:ಕೃಉಇ:2004 ಬೆಂಗಳೂರು ದಿನಾಂಕ: 14ನೇ ಸೆಪ್ಟೆಂಬರ್ 2004**

ಕರ್ನಾಟಕ ರಾಜ್ಯದಲ್ಲಿ ರಾಷ್ಟ್ರೀಯ ಕೃಷಿ ವಿಮಾ ಯೋಜನೆಯಡಿಯಲ್ಲಿ 2004-05ರ ಹಿಂಗಾರು ಹಂಗಾಮಿನಲ್ಲಿ ಹತ್ತಿ (ನೀರಾವರಿ) ಬೆಳೆಯನ್ನು ಆಯ್ದ 2 ಹೋಬಳಿಗಳಲ್ಲಿ ಹಾಗೂ ಹತ್ತಿ (ಮಳೆ ಆಶ್ರಿತ) ಬೆಳೆಯನ್ನು ಆಯ್ದ 48 ಹೋಬಳಿಗಳಲ್ಲಿ ಅಳವಡಿಸಲು ಈ ಮೂಲಕ ಮಂಜೂರಾತಿ ನೀಡಲಾಗಿದೆ.

2004-05ರ ಹಿಂಗಾರು ಹಂಗಾಮಿನಲ್ಲಿ ಹತ್ತಿ (ನೀರಾವರಿ) ಮತ್ತು ಹತ್ತಿ (ಮಳೆ ಆಶ್ರಿತ) ಬೆಳೆಯನ್ನು ಅಳವಡಿಸಿರುವ ಹೋಬಳಿಗಳ ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ.

2004-05ರ ಹಿಂಗಾರು ಹಂಗಾಮಿನಲ್ಲಿ ಹತ್ತಿ (ನೀರಾವರಿ) ಮತ್ತು ಹತ್ತಿ (ಮಳೆ ಆಶ್ರಿತ) ಬೆಳೆಗಳಿಗೆ ನಿಗದಿಪಡಿಸಲಾಗಿರುವ ಇಂಡೆಮ್ನಿಟಿ ಮಟ್ಟ, ವಿಮಾ ಕಂತು ಮತ್ತು ವಿಮಾ ಮೊತ್ತ ಈ ಕೆಳಕಂಡಂತಿದೆ.

| ಬೆಳೆ | ಸಾಮಾನ್ಯ ವಿಮೆಗೆ ಪ್ರತಿ ಹೆಕ್ಟೇರ್‌ಗೆ (ಪ್ರಾರಂಭಿಕ ಇಳುವರಿಯ ಮೌಲ್ಯದವರೆಗೆ) | | |
|---|---|---|---|
| | ಇಂಡೆಮ್ನಿಟಿ ಮಟ್ಟ (ಶೇಕಡಾ) | ವಿಮಾ ಮೊತ್ತ (ರೂ.ಗಳಲ್ಲಿ) | ನಿಖರವಾದ ವಿಮಾ ಕಂತು (ಆಕ್ಚುರಿಯಲ್ ಪ್ರೀಮಿಯಂ) ಬೆಲೆ (ಶೇಕಡ) |
| ಹತ್ತಿ (ನೀರಾವರಿ) | 60 | 2700 | 10.05 |
| ಹತ್ತಿ (ಮಳೆ ಆಶ್ರಿತ) | 60 | 1200 | 17.15 |

ಈ ಯೋಜನೆಯಡಿಯಲ್ಲಿ ಬೆಳೆ ಸಾಲ ಪಡೆಯದ ರೈತರು ಬೆಳೆ ಬಿತ್ತಿದ/ ನಾಟಿ ಮಾಡಿದ ನಂತರ 30 ದಿವಸಗಳೊಳಗಿರುವ ಬೆಳೆಗಳಿಗೆ ಮಾತ್ರ ವಿಮಾ ಕಂತು ಕಟ್ಟಿ ಅರ್ಜಿಯನ್ನು ಸಲ್ಲಿಸತಕ್ಕದ್ದು ಹಾಗೂ ಬೆಳೆಯು ನೋಂದಾಯಿಸುವ ಸಮಯದಲ್ಲಿ ಆರೋಗ್ಯಕರ ವಾಗಿರತಕ್ಕದ್ದು.

ಈ ಯೋಜನೆಗೆ ಒಳಪಡುವ ವಿವಿಧ ಬೆಳೆಗಳಿಗೆ ಬೆಳೆ ಸಾಲ ಪಡೆಯದ ರೈತರು ಬ್ಯಾಂಕುಗಳಿಗೆ ಘೋಷಣೆಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಅಂತಿಮ ದಿನಾಂಕ ಅಕ್ಟೋಬರ್ 31, 2004. ಹಾಗೂ ಈ ಯೋಜನೆಯಡಿಯಲ್ಲಿ ಬೆಳೆ ಸಾಲಪಡೆಯದ ರೈತರು ಬೆಳೆ ಬಿತ್ತಿದ/ ನಾಟಿ ಮಾಡಿದ ನಂತರ 30 ದಿವಸದೊಳಗೆ ಅಥವಾ ದಿನಾಂಕ ಅಕ್ಟೋಬರ್ 31, 2004 ರೊಳಗೆ ಯಾವುದು ಮುಂಚಿಯೋ ಅದರೊಳಗೆ ಬ್ಯಾಂಕಿಗೆ ಘೋಷಣೆಗಳನ್ನು ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿದ ದಿನಾಂಕದ ನಂತರ ಸಲ್ಲಿಸಿದ ಅರ್ಜಿಗಳನ್ನು ತಿರಸ್ಕರಿಸುವುದು.

ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ವಿಮಾ ಕಂತಿನ ಮೇಲೆ ಶೇಕಡ 10ರ ಸಹಾಯಧನವನ್ನು ನೀಡತಕ್ಕದ್ದು.

ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಇವರು ಅಧಿಸೂಚಿತ ಬೆಳೆಗಳಿಗೆ ಹೋಬಳಿವಾರು ಬೆಳೆ ಕಟಾವು ಪ್ರಯೋಗಗಳನ್ನು ನಡೆಸಲು ಬೆಳೆ ಕಟಾವು ಪ್ರಯೋಗಗಳ ಯೋಜನೆ ಹಾಗೂ ಮೂಲ ಕಾರ್ಯಕರ್ತರುಗಳಿಗೆ ತರಬೇತಿಯ ಸೂಕ್ತ ವ್ಯವಸ್ಥೆ ಮಾಡತಕ್ಕದ್ದು.

ಕಂದಾಯ ಇಲಾಖೆಯು ಸೆಪ್ಟೆಂಬರ್ ಮತ್ತು ಅಕ್ಟೋಬರ್ ಮಾಹೆಗಳಲ್ಲಿ ಬಿತ್ತಿದ ಹತ್ತಿ ಬೆಳೆಯನ್ನು ಹಿಂಗಾರು ಹತ್ತಿ ಎಂದು ಪರಿಗಣಿಸಿ ಪಹಣಿಯಲ್ಲಿ ಹತ್ತಿ ಬೆಳೆಯು ಬಿತ್ತಿದ ಕ್ಷೇತ್ರವನ್ನು ನಮೂದಿಸುವುದು.

ಕೃಷಿ ಮತ್ತು ಕಂದಾಯ ಹಾಗೂ ಸಂಬಂಧಪಟ್ಟ ಇಲಾಖೆಗಳು ಯೋಜನೆಯನ್ನು ಅನುಷ್ಠಾನಗೊಳಿಸುವ ಸಂಸ್ಥೆಯು ಕೈಗೊಳ್ಳುವ ಪ್ರಚಾರ, ಪ್ರಕಟಣೆ ಮತ್ತು ತರಬೇತಿ ನೀಡುವಲ್ಲಿ ಸಹಕಾರ ನೀಡಬೇಕು.

ಕೃಷಿ ಇಲಾಖೆ, ಕಂದಾಯ ಇಲಾಖೆ, ಸಹಕಾರ ಇಲಾಖೆ ಹಾಗೂ ಸಂಬಂಧಪಟ್ಟ ಇಲಾಖೆಗಳು ಹಿಂಗಾರು 2004-05ರಲ್ಲಿ ಅಧಿಸೂಚನೆ ನೀಡಿರುವ ಹತ್ತಿ ಬೆಳೆಯ ಮತ್ತು ಹೋಬಳಿಗಳ ಬಗ್ಗೆ ಬ್ಯಾಂಕುಗಳ, ರೈತ ಸಂಪರ್ಕ ಕೇಂದ್ರಗಳ ಮತ್ತು ಗ್ರಾಮ ಪಂಚಾಯತಿ ಕಛೇರಿಗಳ ಸೂಚನಾ ಫಲಕಗಳ ಮೇಲೆ ಪ್ರಕಟಿಸಿ ವ್ಯಾಪಕ ಪ್ರಚಾರ ಕೈಗೊಳ್ಳಲು ಸೂಚಿಸಿದೆ.

ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವಲ್ಲಿ ಅನುಷ್ಠಾನ ಸಂಸ್ಥೆಯಾದ ಭಾರತೀಯ ಕೃಷಿ ವಿಮಾ ಕಂಪನಿ ನಿಯಮಿತ ಇವರು ಬೆಳೆ ವಿಮಾ ಯೋಜನೆಯಲ್ಲಿ ಭಾಗವಹಿಸಲಿರುವ ವಿವಿಧ ಸಂಸ್ಥೆಗಳ ಜೊತೆಯಲ್ಲಿ ಸಮನ್ವಯ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ಅನುಬಂಧ**

**ಸರ್ಕಾರದ ಆದೇಶದ ಸಂಖ್ಯೆ: ಕೃತೋಇ: 392: ಕೃಉಇ: 2004 ಬೆಂಗಳೂರು ದಿನಾಂಕ: 14ನೇ ಸೆಪ್ಟೆಂಬರ್ 2004**

**2004-05ರ ಹಿಂಗಾರು ಹಂಗಾಮಿನಲ್ಲಿ ರಾಷ್ಟ್ರೀಯ ಕೃಷಿ ವಿಮಾ ಯೋಜನೆಯಡಿಯಲ್ಲಿ ಹತ್ತಿ (ನೀರಾವರಿ) ಮತ್ತು ಹತ್ತಿ (ಮಳೆ ಆಶ್ರಿತ) ಬೆಳೆಗಳಿಗೆ ಅಳವಡಿಸಿರುವ ಹೋಬಳಿಗಳ ಪಟ್ಟಿ.**

| ಕ್ರ. ಸಂ. | ಜಿಲ್ಲೆ | ತಾಲ್ಲೂಕು | | ಹೋಬಳಿ | |
|---|---|---|---|---|---|
| | | **ಹತ್ತಿ (ನೀರಾವರಿ)** | | | |
| 1 | ಧಾರವಾಡ | 1 | ಹುಬ್ಬಳ್ಳಿ | 1 | ಶಿರಗುಪ್ಪಿ |
| 2 | ರಾಯಚೂರು | 2 | ದೇವದುರ್ಗ | 2 | ಜಾಲಹಳ್ಳಿ |
| | | **ಹತ್ತಿ (ಮಳೆ ಆಶ್ರಿತ)** | | | |
| 1 | ಬಳ್ಳಾರಿ | 1 | ಬಳ್ಳಾರಿ | 1 | ಕುರುಗೋಡು |
| | | | | 2 | ಮೋಕಾ |
| | | 2 | ಹಡಗಲಿ | 3 | ಹಡಗಲಿ |
| | | | | 4 | ಹಿರೇಹಡಗಲಿ |
| | | | | 5 | ಇಟಗಿ |
| | | 3 | ಹಗರಿಬೊಮ್ಮನಹಳ್ಳಿ | 6 | ಹಂಪಸಾಗರ |
| | | | | 7 | ಕೋಗಳಿ |
| | | 4 | ಹೊಸಪೇಟೆ | 8 | ಕಂಪ್ಲಿ |
| | | 5 | ಕೂಡ್ಲಿಗಿ | 9 | ಕೊಟ್ಟೂರು |
| | | 6 | ಸಿರಗುಪ್ಪ | 10 | ಹಚ್ಚೋಳಿ |
| | | | | 11 | ಕರೂರು |
| | | | | 12 | ಸಿರಗುಪ್ಪ |
| | | | | 13 | ತೆಕ್ಕಲಕೋಟೆ |
| 2 | ಚಿತ್ರದುರ್ಗ | 7 | ಹಿರಿಯೂರು | 14 | ಐಮಂಗಲ |
| 3 | ಧಾರವಾಡ | 8 | ಹುಬ್ಬಳ್ಳಿ | 15 | ಚಬ್ಬಿ |
| | | | | 16 | ಹುಬ್ಬಳ್ಳಿ |
| | | | | 17 | ಶಿರಗುಪ್ಪಿ |
| | | 9 | ಕುಂದಗೋಳ | 18 | ಕುಂದಗೋಳ |
| | | | | 19 | ಸಂಶಿ |
| | | 10 | ನವಲಗುಂದ | 20 | ಅಣ್ಣಿಗೇರಿ |
| | | | | 21 | ಮೊರಬ |
| 4. | ಗದಗ | 11 | ಗದಗ | 22 | ಬೆಟಗೇರಿ |
| | | | | 23 | ಗದಗ |
| | | 12 | ಮುಂಡರಗಿ | 24 | ದಂಬಳ |
| | | | | 25 | ಮುಂಡರಗಿ |
| 5 | ಹಾವೇರಿ | 13 | ಹಿರೇಕೆರೂರು | 26 | ರಟ್ಟಿಹಳ್ಳಿ |
| | | 14 | ಸವಣೂರು | 27 | ಹತ್ತಿಮತ್ತೂರು |
| | | | | 28 | ಸವಣೂರ |
| | | 15 | ಶಿಗ್ಗಾಂವ್ | 29 | ಶಿಗ್ಗಾಂವ್ |
| | | | | 30 | ಬಂಕಾಪುರ |
| 6 | ಕೊಪ್ಪಳ | 16 | ಗಂಗಾವತಿ | 31 | ಕಾರಟಗಿ |
| | | | | 32 | ಸಿದ್ದಾಪುರ |
| | | | | 33 | ವೆಂಕಟಗಿರಿ |
| | | 17 | ಕೊಪ್ಪಳ | 34 | ಅಳವಂಡಿ |
| | | | | 35 | ಕೊಪ್ಪಳ |
| | | 18 | ಯಲಬುರ್ಗ | 36 | ಕೂಕನೂರು |
| | | | | 37 | ಮಂಗಳೂರ |
| | | | | 38 | ಯಲಬುರ್ಗ |

| ಕ್ರ. ಸಂ. | ಜಿಲ್ಲೆ | ತಾಲ್ಲೂಕು | | ಹೋಬಳಿ | |
|---|---|---|---|---|---|
| 7 | ರಾಯಚೂರು | 19 | ದೇವದುರ್ಗ | 39 | ಅರಕೇರಾ |
| | | | | 40 | ದೇವದುರ್ಗ |
| | | | | 41 | ಗಬ್ಬೂರು |
| | | | | 42 | ಜಾಲಹಳ್ಳಿ |
| | | 20 | ಮಾನ್ವಿ | 43 | ಕಲ್ಲೂರು |
| | | | | 44 | ಕುರಡಿ |
| | | | | 45 | ಮಾನ್ವಿ |
| | | | | 46 | ಸಿರವಾರ |
| | | 21 | ರಾಯಚೂರು | 47 | ದೇವಸುಗೂರು |
| | | | | 48 | ಕಲ್ಮಲಾ |

**ವಿ. ಕುಮಾರ್**

ಪಿ.ಆರ್. 1121 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ತಿದ್ದುಪಡಿ ಸಂಖ್ಯೆ: ಕೃತೋಇ:162:ಕೃಉಇ: 2004 ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2004**

**ವಿಷಯ :** ರಾಷ್ಟ್ರೀಯ ಕೃಷಿ ವಿಮಾ ಯೋಜನೆಯನ್ನು 2004ರ ಮುಂಗಾರು ಹಂಗಾಮಿನಲ್ಲಿ ಬೆಳೆ ಮತ್ತು ಹೋಬಳಿಗಳ ಘೋಷಣೆ ಬಗ್ಗೆ ಆದೇಶಗಳು.

**ಉಲ್ಲೇಖ :** 1. ಸಮಸಂಖ್ಯೆಯ ಸರ್ಕಾರದ ಆದೇಶ ದಿನಾಂಕ: 24.05.2004

ರಾಷ್ಟ್ರೀಯ ಕೃಷಿ ವಿಮಾ ಯೋಜನೆಯನ್ನು 2004ರ ಮುಂಗಾರು ಹಂಗಾಮಿನಲ್ಲಿ ಬೆಳೆ ಮತ್ತು ಹೋಬಳಿಗಳ ಘೋಷಣೆ ಬಗ್ಗೆ ಉಲ್ಲೇಖಿತ ಆದೇಶದ ಉದ್ಧೃತ ಭಾಗದ ಕಂಡಿಕೆ 3ರಲ್ಲಿ ಉಲ್ಲೇಖಿಸಿರುವ ಅನುಬಂಧ-2ರ ಕ್ರಮ ಸಂಖ್ಯೆ: 26 ರಿಂದ 33 ರವರೆಗಿನ ತಃಖ್ತೆಯನ್ನು ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು.

| ಕ್ರ. ಸಂ. | ಬೆಳೆ | ಸಾಮಾನ್ಯ ವಿಮೆಗೆ ಪ್ರತಿ ಹೆಕ್ಟೇರ್ ಗೆ (ಪ್ರಾರಂಭಿಕ ಇಳುವರಿಯ ಮೌಲ್ಯದವರೆಗೆ) | | ಹೆಚ್ಚಿನ ವಿಮೆಗಾಗಿ ಪ್ರತಿ ಹೆಕ್ಟೇರ್‌ಗೆ (ಪ್ರಾರಂಭಿಕ ಇಳುವರಿಯ ಮೌಲ್ಯಕ್ಕೆ ಮೇಲ್ಪಟ್ಟಿದ್ದು ಸರಾಸರಿ ಇಳುವರಿ ಮೌಲ್ಯದ ಶೇ. 150ರಷ್ಟಕ್ಕೆ) | |
|---|---|---|---|---|---|
| | | ಈ ಹಿಂದೆ ಸರ್ಕಾರಿ ಆದೇಶದಲ್ಲಿ ನಮೂದಿಸಿರುವ ನಿಖರವಾದ ವಿಮಾ ಕಂತು ಶೇಕಡಾ | ಪರಿಷ್ಕೃತ ನಿಖರವಾದ ವಿಮಾ ಕಂತು ಶೇಕಡಾ | ಈ ಹಿಂದೆ ಸರ್ಕಾರಿ ಆದೇಶದಲ್ಲಿ ನಮೂದಿಸಿರುವ ನಿಖರವಾದ ವಿಮಾ ಕಂತು ಶೇಕಡಾ | ಪರಿಷ್ಕೃತ ನಿಖರವಾದ ವಿಮಾ ಕಂತು ಶೇಕಡಾ |
| 26 | ಹತ್ತಿ (ನೀರಾವರಿ) | 9.65 | 8.15 | 9.65 | 8.15 |
| 27 | ಹತ್ತಿ (ಮಳೆ ಆಶ್ರಿತ) | 13.50 | 12.50 | 13.50 | 12.50 |
| 28 | ಆಲೂಗೆಡ್ಡೆ (ನೀರಾವರಿ) | 12.15 | 12.15 | 12.15 | 12.15 |
| 29 | ಆಲೂಗೆಡ್ಡೆ (ಮಳೆ ಆಶ್ರಿತ) | 11.25 | 9.60 | 11.25 | 9.60 |
| 30 | ಈರುಳ್ಳಿ (ನೀರಾವರಿ) | 5.00 | 7.75 | 5.00 | 7.75 |
| 31 | ಈರುಳ್ಳಿ (ಮಳೆ ಆಶ್ರಿತ) | 11.20 | 4.25 | 11.20 | 4.25 |
| 32. | ಮೆಣಸಿನಕಾಯಿ (ನೀರಾವರಿ) | 17.20 | 6.10 | 17.20 | 6.10 |
| 33 | ಮೆಣಸಿನಕಾಯಿ (ಮಳೆ ಆಶ್ರಿತ) | 20.20 | 15.80 | 20.20 | 15.80 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1122

**ವಿ. ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ :** ಕೋಲಾರ ಜಿಲ್ಲೆ ಮುಳಬಾಗಿಲು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ನಡೆದ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಅಧಿಕಾರಿ: ಸಿಬ್ಬಂದಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 5.6.2003ರ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರ ಪತ್ರ ಸಂಖ್ಯೆ: ಸಿ2(5) ದೂರು 60:2002-03

2. ದಿನಾಂಕ: 6.3.2004ರ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರ ಪತ್ರ ಸಂಖ್ಯೆ: ಸಿ2(5) ದೂರು 60:2002-03

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ದಿನಾಂಕ: 5.6.2003ರ ಪತ್ರದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರು ಸಲ್ಲಿಸಿದ ಪ್ರಸ್ತಾವನೆಯಲ್ಲಿ ಕೋಲಾರ ಜಿಲ್ಲೆಯ ಉಪನಿರ್ದೇಶಕರು ಅನಧಿಕೃತ ಭೇಟಿನೀಡಿ, ತನಿಖೆ ಮಾಡಿದಾಗ, ಮುಳಬಾಗಿಲು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಈ ಕೆಳಕಂಡ ಅವ್ಯವಹಾರಗಳು ಜರುಗಿದ ಬಗ್ಗೆ ವರದಿ ಮಾಡಿರುವುದಾಗಿ ತಿಳಿಸಿರುತ್ತಾರೆ.

1) 2000-2001ನೇ ಸಾಲಿನಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರುಗಳು ಸೇವಾ ಜೇಷ್ಟತೆಯ ಮೇಲೆ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಿಗೆ ಮುಖ್ಯೋಪಾಧ್ಯಾಯರಾಗಿ ಮುಂಬಡ್ತಿ ಪಡೆದು ಕೌನ್ಸಿಲಿಂಗ್ ಮೂಲಕ ಸ್ವಇಚ್ಛೆಯಿಂದ ಸ್ಥಳ ಆಯ್ಕೆ ಮಾಡಿಕೊಂಡಿರುತ್ತಾರೆ. ಇವರುಗಳು ನಿಯಮಾನುಸಾರ ಯಾವುದೇ ಸೇರುವ ಕಾಲ ಅಥವಾ ವರ್ಗಾವಣಾ ಅನುದಾನಗಳಿಗೆ ಅನರ್ಹರಾಗಿರುತ್ತಾರೆ. ಹೀಗಿದ್ದರೂ ಸಹ, ಅಂತಹ 25 ಮಂದಿ ಶಿಕ್ಷಕರುಗಳಿಗೆ 10 ದಿನಗಳ ಗಳಿಕೆ ರಜೆ ಮತ್ತು 19 ಮಂದಿ ಶಿಕ್ಷಕರುಗಳಿಗೆ ತಲಾ ರೂ.900-00 ರಂತೆ ವರ್ಗಾವಣಾ ಅನುದಾನಗಳನ್ನು ನಿಯಮಬಾಹಿರವಾಗಿ ಮಂಜೂರು ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟ ಎಸಗಿರುತ್ತಾರೆ.
2) ಶಿಕ್ಷಕರುಗಳ ಸೇವಾ ಪುಸ್ತಕದಲ್ಲಿ ವಾರ್ಷಿಕ ವೇತನ ಬಡ್ತಿಗಳನ್ನು ಮಂಜೂರು ಮಾಡಿದ್ದಕ್ಕೆ ಷರಾ ದಾಖಲಿಸಿದ್ದರೂ ಸಹ ಯಾವುದನ್ನೂ ಕ್ಷೇತ್ರ ಶಿಕ್ಷಣಾಧಿಕಾರಿಗಳು ದೃಢೀಕರಿಸಿರುವುದಿಲ್ಲ;
3) 2000-2001ನೇ ಸಾಲಿನಲ್ಲಿ ಶಿಕ್ಷಕರ ವೇತನ ಹುಂಡಿಗಳನ್ನು ಗಣಕ ಯಂತ್ರದಲ್ಲಿ ತಯಾರಿಸುವ ಸಲುವಾಗಿ ರೂ. 3000-00 ಗಳನ್ನು ನಿಯಮಬಾಹಿರವಾಗಿ ಪಾವತಿಸಲಾಗಿದೆ;
4) 2000-2001ನೇ ಸಾಲಿನಲ್ಲಿ ಅಂದರೆ ದಿನಾಂಕ: 23.12.2000 ಮತ್ತು 25.06.2002ರಲ್ಲಿ ಚೆಕ್ ಮೂಲಕ ಡ್ರಾ ಮಾಡಿರುವ ಒಟ್ಟು ಮೊತ್ತ ರೂ. 13,532-00 ಕ್ಕೆ ಯಾವ ರಸೀದಿಗಳನ್ನೂ ನಿರ್ವಹಿಸದೇ ದುರುಪಯೋಗಪಡಿಸಿಕೊಳ್ಳಲಾಗಿದೆ.

ಮೇಲ್ಕಾಣಿಸಿದ ಹಣಕಾಸಿನ ಅವ್ಯವಹಾರಗಳಿಗೆ ಮುಳಬಾಗಿಲು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯ ಈ ಕೆಳಕಂಡ ಅಧಿಕಾರಿ: ಸಿಬ್ಬಂದಿಯವರು ಜವಾಬ್ದಾರರೆಂದು ಅಭಿಪ್ರಾಯಿಸಿ, ಅವರುಗಳ ವಿರುದ್ಧ ಸಿಸಿಎ ನಿಯಮಗಳ ಮೇರೆಗೆ ಶಿಸ್ತುಕ್ರಮ ಜರುಗಿಸಲು ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ.

1. ಶ್ರೀ ಎಸ್. ಎ. ಪದ್ಮನಾಭ - ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ಮುಳಬಾಗಿಲು
2. ಶ್ರೀ ಕೆ. ನಾರಾಯಣಚಾರಿ - ವ್ಯವಸ್ಥಾಪಕರು, ಕ್ಷೇತ್ರಶಿಕ್ಷಣಾಧಿಕಾರಿ ಕಛೇರಿ, ಮುಳಬಾಗಿಲು
3. ಶ್ರೀ ಡಿ. ವಿ. ಶ್ರೀನಿವಾಸಯ್ಯ - ಪ್ರಥಮ ದರ್ಜೆ ಸಹಾಯಕ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಮುಳಬಾಗಿಲು

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಬೇಕಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11 ಹಾಗೂ 13ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಪ್ರಕರಣದ ಜಂಟಿ ವಿಚಾರಣೆಗಾಗಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರನ್ನು ಶಿಸ್ತುಪ್ರಾಧಿಕಾರಿಯಾಗಿ ನೇಮಕ ಮಾಡಲು ಸರ್ಕಾರವು ನಿರ್ಧರಿಸಿ, ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶಸಂಖ್ಯೆ: ಇಡಿ 106 ಡಿಜಿಡಿ 2003, ಬೆಂಗಳೂರು ದಿನಾಂಕ: 5ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕೋಲಾರ ಜಿಲ್ಲಾ ಮುಳಬಾಗಿಲು ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿಯ ಈ ಕೆಳಕಂಡ ಅಧಿಕಾರಿ: ಸಿಬ್ಬಂದಿ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11 ಹಾಗೂ 13ರ ಮೇರೆಗೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರನ್ನು ಈ ಪ್ರಕರಣದ ಜಂಟಿ ವಿಚಾರಣೆಗಾಗಿ ಶಿಸ್ತುಪ್ರಾಧಿಕಾರಿಯಾಗಿ ನೇಮಕ ಮಾಡಿರುತ್ತದೆ.

1. ಶ್ರೀ ಎಸ್. ವಿ. ಪದ್ಮನಾಭ - ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ಮುಳಬಾಗಿಲು
2. ಶ್ರೀ ಕೆ. ನಾರಾಯಣಚಾರಿ - ವ್ಯವಸ್ಥಾಪಕರು, ಕ್ಷೇತ್ರಶಿಕ್ಷಣಾಧಿಕಾರಿ ಕಛೇರಿ, ಮುಳಬಾಗಿಲು
3. ಶ್ರೀ ಡಿ. ವಿ. ಶ್ರೀನಿವಾಸಯ್ಯ - ಪ್ರಥಮ ದರ್ಜೆ ಸಹಾಯಕ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಮುಳಬಾಗಿಲು

ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರಿಗೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 8ರಲ್ಲಿನ ದಂಡನೆ (ii) (iii) (iii-ಎ) (iv) ಮತ್ತು (iv-ಎ)ಅನ್ನು ವಿಧಿಸಲು ಅಧಿಕಾರವನ್ನೂ ಸಹ ಪ್ರತ್ಯಾಯೋಜಿಸಲಾಗಿದೆ.

ವಿಚಾರಣೆಯ ನಂತರ ಕಠಿಣ ದಂಡನೆ ವಿಧಿಸುವ ಅವಶ್ಯಕತೆಯಿದೆ ಎಂದು ಕಂಡುಬಂದಲ್ಲಿ ಅವರಿಗೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11(21)(ಎ)ರನ್ವಯ ಕ್ರಮ ಜರುಗಿಸುವಂತೆ ಸೂಚಿಸಿದೆ.

ಅವರು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11 ಹಾಗೂ 11ಎ, ಗಳಲ್ಲಿ ನಿಗದಿಪಡಿಸಿದ ಕ್ರಮ ಅನುಸರಿಸತಕ್ಕದ್ದು ಮತ್ತು ಈ ಪ್ರಕರಣದ ವಿಚಾರಣೆಯನ್ನು ಈ ಆದೇಶ ತಲುಪಿದ ಮೂರು ತಿಂಗಳ ಒಳಗೆ ವಿಲೇವಾರಿ ಮಾಡಲು ಸರ್ಕಾರವು ನಿರ್ದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1124

**ಎಫ್. ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು 1,2).

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಸತ್ಯನಾರಾಯಣ ಮಾಜಿ ಹೆಚ್‌ಸಿ 115, ಮೈಸೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :** 1. ಎಸ್.ಪಿ.ಮೈಸೂರು ಜಿಲ್ಲೆರವರ ಅ.ಸಂ. ಡಿ೩ 07:2001-02 ಓಟಿ ಸಂ: ಸಿಎಲ್:08:2003-04 ದಿನಾಂಕ: 22.4.03.

2. ಐಜಿಪಿ, ದ. ವ. ಮೈಸೂರು ರವರ ಅ.ಸಂ. ಅಪೀಲು: 5: 2003-04 ದಿನಾಂಕ: 20.08.03.

3. ಅರ್ಜಿದಾರರ ಮನವಿ ದಿನಾಂಕ: 22.10.03

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂ: ಅಪೀಲು (2)97: 2003-04 ದಿನಾಂಕ: 30.04.04.

**ಪ್ರಸ್ತಾವನೆ:**

ಶ್ರೀ ಸತ್ಯನಾರಾಯಣ, ಮಾಜಿ ಹೆಚ್‌ಸಿ 115, ಮೈಸೂರು ಜಿಲ್ಲೆ ರವರ ವಿರುದ್ಧ, (ಇನ್ನು ಮುಂದೆ ಅರ್ಜಿದಾರರ ಕರೆಯುವ) ಈ ಕೆಳಕಂಡ ದೋಷಾರೋಪಕ್ಕೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು) ನಿಯಮದಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

1) "ಸರ್ಕಾರಿ ಸೇವೆಯಲ್ಲಿರುವಾಗ ಇವರ ಮೊದಲ ಪತ್ನಿ ಜೀವಂತ ಇರುವಾಗಲೇ ಎರಡನೇ ಮದುವೆಯಾಗಿ ಕೆಸಿಎಸ್ (ನಡತೆ) ನಿಯಮ 28 ಮತ್ತು ಕೆ.ಪಿ.ಎಂ. ಆದೇಶ ಸಂ. 319 ರನ್ನು ಮೀರಿ ದುರ್ನಡತೆ ತೋರಿದ ಸಂಬಂಧ.

2) ಮಣಿ ಅಲಿಯಾಸ್ ಭಾರತಿಯನ್ನು ಮದುವೆಯಾಗಲಿಕ್ಕೆ ಆಕೆಯ ಪೋಷಕರಿಂದ ರೂ.50,000-00 ವರದಕ್ಷಿಣೆ ಪಡೆದಿರುವ ಬಗ್ಗೆ.

ಮೇಲ್ಕಂಡ ಆರೋಪಗಳಲ್ಲಿ 1ನೇ ಆರೋಪ ನಿಸ್ಸಂದೇಹವಾಗಿ ಸಾಬೀತಾದ್ದರಿಂದ ಶಿಸ್ತು ಪ್ರಾಧಿಕಾರಿ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿರುತ್ತಾರೆ. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದ್ದು ಅದರ ಮುಖ್ಯ ಸಾರಾಂಶಗಳು ಈ ಕೆಳಕಂಡಂತಿವೆ.

1) ತಾನು ಎರಡನೇ ಮದುವೆಯನ್ನು ಮೊದಲ ಪತ್ನಿಯ ಮೌಖಿಕ ಅನುಮತಿ ಪಡೆದು ಆಗಿರುತ್ತೇನೆ. ಮೊದಲ ಪತ್ನಿ ಮತ್ತು ಮಕ್ಕಳ ಜೀವನ ನಿರ್ವಹಣೆಗೆ ಅರ್ಧ ವೇತನ ನೀಡಿರುತ್ತೇನೆ.

2) ಕೆ.ಪಿ.ಎಂ. 319 ಬೇರೆ ಇದೆ. ಹೊಸ ಆವೃತ್ತಿಯಲ್ಲಿ ಪೊಲೀಸ್ ಸಿಬ್ಬಂದಿ ತಮ್ಮ ಕುಟುಂಬದ ಯೋಗ ಕ್ಷೇಮವನ್ನು ಯೋಗ್ಯ ರೀತಿಯಲ್ಲಿ ನೋಡಿಕೊಳ್ಳಬೇಕೆಂದು ಇದೆ ಯಾವುದು ಸರಿ ತಿಳಿಯುತ್ತಿಲ್ಲ.

3) ಆರೋಪಣ 1 ಪತ್ರದಲ್ಲಿ ನಿಯಮಗಳ ಉಲ್ಲೇಖವಿಲ್ಲ.

4) ದಂಡನೆಯನ್ನು ಕೆಸಿಎಸ್ ನಿಯಮ (218) ಪ್ರಕಾರ ವಿಧಿಸಲಾಗಿದೆ ಎಂಬುದರ ಬಗ್ಗೆ ಸ್ಪಷ್ಟವಿಲ್ಲ.

ಅರ್ಜಿದಾರರು ಮೊದಲ ಪತ್ನಿ ಜೀವಂತವಿರುವಾಗಲೇ ಅವರ ಅನುಮತಿ ಪಡೆದು ಎರಡನೇ ಮದುವೆ ಮಾಡಿಕೊಂಡಿರುವುದಾಗಿ ಒಪ್ಪಿಕೊಂಡಿರುತ್ತಾರೆ. ಮೊದಲ ಪತ್ನಿ ಜೀವಂತವಿರುವಾಗ ಎರಡನೇ ಮದುವೆ ಮಾಡಿಕೊಳ್ಳುವುದು ಕೆಸಿಎಸ್ (ಶಿಸ್ತು) ನಿಯಮ 28ಕ್ಕೆ ವಿರುದ್ಧ ಅರ್ಜಿದಾರರ ವಾದಾಂಶಗಳಲ್ಲಿ ಅವರ ಮೇಲಿನ ಆರೋಪವನ್ನು ಅಲ್ಲಗೆಳೆಯವಂತಹ ಅಂಶಗಳನ್ನು ಮಂಡಿಸದಿದ್ದು ಅವರಿಗೆ ವಿಧಿಸಿರುವ ಶಿಕ್ಷೆ ಅನುಗುಣವಾಗಿದೆ ಇದರಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಒಇ 237 ಪೊಸಿಅ 2003 ದಿನಾಂಕ: 7ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸತ್ಯನಾರಾಯಣ ಮಾಜಿ ಹೆಚ್‌ಸಿ 115, ಮೈಸೂರು ಜಿಲ್ಲೆರವರು ಸರ್ಕಾರಕ್ಕೆ ಸಲ್ಲಿಸಿರುವ ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1129

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ವಿವಿಧ ವರ್ಗಗಳ ಮಾರಾಟಗಾರರ ನಮೂದಿತ ಪಟ್ಟಿಯಿಂದ ಮೆ: ಸಿರೆಬ್ರಾ ಇಂಟಿಗ್ರೇಟೆಡ್ ಟೆಕ್ನಾಲಜೀಸ್ ಲಿ., ಸಂಸ್ಥೆಯನ್ನು ತೆಗೆದುಹಾಕುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 24.5.2004ರ ಸರ್ಕಾರದ ಆದೇಶ ಸಂ. ಸಿಆಸುಇ 42 ಇಜಿವಿ 2004

2. ದಿನಾಂಕ: 21.8.2004 ರಂದು ನಡೆದ ತಾಂತ್ರಿಕ ಸಲಹಾ ಸಮಿತಿಯ ಉಪಸಮಿತಿಯ ನಡವಳಿಗಳು.

3. ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 20.9.2004 ರಂದು ನಡೆದ ತಾಂತ್ರಿಕ ಸಲಹಾ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮೆ: ಸಿರೆಬ್ರಾ ಇಂಟಿಗ್ರೇಟೆಡ್ ಟೆಕ್ನಾಲಜೀಸ್ ಲಿ., ಸಂಸ್ಥೆಯ ಹೆಸರನ್ನು ರಾಜ್ಯದಲ್ಲಿನ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಉಪಕರಣಗಳು, ವಿವಿಧ ತಂತ್ರಾಂಶಗಳನ್ನು ಪೂರೈಸುವುದಕ್ಕಾಗಿ ನಮೂದಿತ ಪಟ್ಟಿಯಲ್ಲಿ ಸೇರಿಸಲಾಗಿತ್ತು. ಈ ಸಂಸ್ಥೆಯ ಸೇವೆಯ ಬಗ್ಗೆ

ಅನೇಕ ದೂರುಗಳು ಬಂದ ಕಾರಣ, ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯ ಡಾ: ಡಿ. ಕೆ. ಸುಬ್ರಹ್ಮಣ್ಯ ಇವರ ಅಧ್ಯಕ್ಷತೆಯಲ್ಲಿ ನಡೆದ ತಾಂತ್ರಿಕ ಸಲಹಾ ಸಮಿತಿಯ ಉಪಸಮಿತಿಯ ಸಭೆಗಳಲ್ಲಿ ವಿವರವಾಗಿ ಪರಿಶೀಲಿಸಲ್ಪಟ್ಟು, ಸದರಿ ಉಪಸಮಿತಿಯ ಶಿಫಾರಸ್ಸುಗಳ ಮೇರೆಗೆ, ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ತಾಂತ್ರಿಕ ಸಲಹಾ ಸಮಿತಿಯಿಂದ ಮಾರಾಟಗಾರರ ನಮೂದಿತ ಪಟ್ಟಿಯಿಂದ ಖರೀದಿ ಪ್ರಕ್ರಿಯೆಯಲ್ಲಿ ಭಾಗವಹಿಸದಂತೆ ನಿರ್ಬಂಧ ವಿಧಿಸಲು ಅನುಮೋದಿಸಲ್ಪಟ್ಟಿರುತ್ತದೆ. ಅಂತೆಯೇ ಈ ಕೆಳಕಾಣಿಸಿದಂತೆ ಸರ್ಕಾರದ ಆದೇಶವನ್ನು ಪ್ರಸ್ತಾಪಿಸಲಾಗಿದೆ.

**ಸರ್ಕಾರದ ಆದೇಶ ಸಿಆಸುಇ 28 ಇಆಇ 2004 ಬೆಂಗಳೂರು ದಿನಾಂಕ: 1ನೇ ಅಕ್ಟೋಬರ್ 2004**

ರಾಜ್ಯದಲ್ಲಿನ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಉಪಕರಣಗಳು, ವಿವಿಧ ತಂತ್ರಾಂಶಗಳನ್ನು ಪೂರೈಸುವುದಕ್ಕಾಗಿ ಹಾಗೂ ತಾಂತ್ರಿಕ ಸೇವೆಗಳನ್ನು ನೀಡುವುದಕ್ಕಾಗಿ ಮಾರಾಟಗಾರರ ನಮೂದಿತ ಪಟ್ಟಿಯಲ್ಲಿ ಕ್ರಮ ಸಂಖ್ಯೆ (6)ರಲ್ಲಿನ ಮೆ: ಸಿರೆಬ್ರಾ ಇಂಟಿಗ್ರೇಟೆಡ್ ಟೆಕ್ನಾಲಜೀಸ್ ಲಿ., ಎಸ್ 5, 3ನೇ ಅಡ್ಡರಸ್ತೆ, 1ನೇ ಹಂತ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು- 560058 ಸಂಸ್ಥೆಯ ಹೆಸರನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆಗೆದುಹಾಕಲಾಗಿದೆ ಹಾಗೂ ಒಂದು ವರ್ಷ ಅವಧಿಯವರೆಗೆ ಸದರಿ ಸಂಸ್ಥೆಯು ಸರ್ಕಾರದ ಯಾವುದೇ ಖರೀದಿ ಪ್ರಕ್ರಿಯೆಯಲ್ಲಿ ಭಾಗವಹಿಸದಂತೆ ನಿರ್ಬಂಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಆರ್. ವಲ್ಲೂರ**

ಪಿ.ಆರ್. 1135 ಪೀಠಾಧಿಕಾರಿ, ಇ-ಆಡಳಿತ, ಸಿಆಸುಇಲಾಖೆ. (ಆ.ಸು).

## ಕಂದಾಯ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಕಂಇ 36 ಮುನೋಮು 2003 ಬೆಂಗಳೂರು, ದಿನಾಂಕ 22ನೇ ಸೆಪ್ಟೆಂಬರ್ 2004**

**ವಿಷಯ :** ಕರ್ನಾಟಕ ರಾಜ್ಯ ಸಹಕಾರಿ ವಸತಿ ಮಹಾಮಂಡಲ ನಿಯಮಿತ, ಬೆಂಗಳೂರು ಇವರಿಗೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ವಿನಾಯಿತಿ ನೀಡುವ ಕುರಿತು.

ಸರ್ಕಾರದ ಆದೇಶ ಸಂಖ್ಯೆ: ಕಂಇ 36 ಮುನೋಮು 2003, ದಿನಾಂಕ: 2.1.2004ರ ಆದೇಶದಲ್ಲಿ ಕರ್ನಾಟಕ ರಾಜ್ಯ ಸಹಕಾರಿ ವಸತಿ ಮಹಾಮಂಡಲ ನಿಯಮಿತ, ಬೆಂಗಳೂರು ಇವರು ರಾಷ್ಟ್ರೀಯ ವಸತಿ ಬ್ಯಾಂಕ್ ಜೀವವಿಮಾ ನಿಗಮ ಮತ್ತು ಇತರ ಸಾಲ ನೀಡುವ ಸಂಸ್ಥೆಗಳಿಂದ ಪಡೆಯುವ ಸಾಲಗಳಿಗೆ ಸದರಿ ಸಂಸ್ಥೆಗಳಿಗೆ ಕರ್ನಾಟಕ ರಾಜ್ಯ ಸಹಕಾರಿ ವಸತಿ ಮಹಾಮಂಡಲವು ಬರೆದು ಕೊಡುವ ಸಾಲದ ದಸ್ತಾವೇಜುಗಳಿಗೆ ಪ್ರತಿ ಹಣಕಾಸು ವರ್ಷದಲ್ಲಿ ಒಟ್ಟು ರೂ. 25.00 ಕೋಟಿ (ಈಗಾಗಲೇ ನೀಡಿರುವ ರೂ. 5.00 ಕೋಟಿ ಸೇರಿದೆ) ವರೆಗಿನ ದಸ್ತಾವೇಜುಗಳಿಗೆ ತಗಲುವ ಮೊದಲ ಹಂತದ ಮುದ್ರಾಂಕ ಶುಲ್ಕ ರೂ. 12.50 ಲಕ್ಷಗಳಿಗೆ ಮಾತ್ರ ಕರ್ನಾಟಕ ಮುದ್ರಾಂಕ ಕಾಯ್ದೆ 1957 (ಕಾಯ್ದೆ ಕಲಂ 34) ರ ಕಲಂ 9(1)(ಎ)ರ ಪ್ರಕಾರ ಹಾಗೂ ನೋಂದಣಿ ಶುಲ್ಕ ರೂ. 10,000 ಗಳಿಗೆ ಮಾತ್ರ ನೋಂದಣಿ ಕಾಯ್ದೆ 1908 (ಕೇಂದ್ರಿಯ ಕಾಯ್ದೆ 1908 XVIನೇ ಕಾಯ್ದೆ) ರ ಕಲಂ 78ರ ಪ್ರಕಾರ ಸರ್ಕಾರವು ವಿನಾಯಿತಿ ನೀಡಿ ಆದೇಶಿಸಿದೆ.

ಸದರಿ ಆದೇಶವನ್ನು ತಿದ್ದುಪಡಿ ಮಾಡಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

"ಕರ್ನಾಟಕ ರಾಜ್ಯ ಸಹಕಾರಿ ವಸತಿ ಮಹಾಮಂಡಲ ನಿಯಮಿತ, ಬೆಂಗಳೂರು ಇವರು ರಾಷ್ಟ್ರೀಯ ವಸತಿ ಬ್ಯಾಂಕ್ ಜೀವ ವಿಮಾ ನಿಗಮ ಮತ್ತು ಇತರ ಸಾಲ ನೀಡುವ ಸಂಸ್ಥೆಗಳಿಂದ ಪಡೆಯುವ ಸಾಲಗಳಿಗೆ ಸದರಿ ಸಂಸ್ಥೆಗಳಿಗೆ ಕರ್ನಾಟಕ ರಾಜ್ಯ ಸಹಕಾರಿ ವಸತಿ ಮಹಾಮಂಡಲವು ಬರೆದು ಕೊಡುವ ಸಾಲದ ದಸ್ತಾವೇಜುಗಳಿಗೆ 2003-2004ನೇ ಸಾಲಿಗೆ ಅಂದರೆ ಒಂದು ವರ್ಷಕ್ಕೆ ಮಾತ್ರ ಒಟ್ಟು ರೂ. 25.00 ಕೋಟಿ (ಈಗಾಗಲೇ ನೀಡಿರುವ ರೂ. 5.00 ಕೋಟಿ ಸೇರಿದೆ) ವರೆಗಿನ ದಸ್ತಾವೇಜುಗಳಿಗೆ ತಗಲುವ ಮೊದಲ ಹಂತದ ಮುದ್ರಾಂಕ ಶುಲ್ಕ ರೂ. 12.50 ಲಕ್ಷಗಳಿಗೆ ಮಾತ್ರ ಕರ್ನಾಟಕ ಮುದ್ರಾಂಕ ಕಾಯ್ದೆ 1957 (ಕಾಯ್ದೆ ಕಲಂ 34) ರ ಕಲಂ 9(1)(ಎ)ರ ಪ್ರಕಾರ ಹಾಗೂ ನೋಂದಣಿ ಶುಲ್ಕ ರೂ. 10,000 ಗಳಿಗೆ ಮಾತ್ರ ನೋಂದಣಿ ಕಾಯ್ದೆ 1908 (ಕೇಂದ್ರಿಯ ಕಾಯ್ದೆ 1908 XVIನೇ ಕಾಯ್ದೆ)ರ ಕಲಂ 78ರ ಪ್ರಕಾರ ಸರ್ಕಾರವು ವಿನಾಯಿತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಎನ್. ಶ್ರೀಮುಖಿ**

ಪಿ.ಆರ್. 1105 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ :** ಶ್ರೀ ನೀಲಕಂಠ, ಎಹೆಚ್‌ಸಿ 34, ಡಿಎಆರ್, ಗುಲ್ಬರ್ಗಾ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಅರ್ಜಿ ಬಗ್ಗೆ.

**ಓದಲಾಗಿದೆ :**
1. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಗುಲ್ಬರ್ಗಾ ರವರ ಆದೇಶ ಸಂಖ್ಯೆ: ಪಿಆರ್:12:2001 ಓಬಿ ಸಂ.1408/01 ದಿನಾಂಕ: 1.6.2001.
2. ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ರವರ ಆದೇಶ ಸಂಖ್ಯೆ: ಅಪೀಲು 93: ಈವ 2001 ದಿನಾಂಕ: 21.2.2002.
3. ಅರ್ಜಿದಾರರ ಮನವಿ ದಿನಾಂಕ: 28.5.2002.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು (2)46/2002-03 ದಿನಾಂಕ: 11.11.2003

**ಪ್ರಸ್ತಾವನೆ:**

ಶ್ರೀ ನೀಲಕಂಠ, ಎಹೆಚ್‌ಸಿ 34, ಡಿಎಆರ್, ಗುಲ್ಬರ್ಗಾ ರವರ ವಿರುದ್ಧ ದಿನಾಂಕ: 10.5.2001 ರಂದು ಎಂ.ಎಂ. ಹಿಲ್ಸ್‌ಗೆ ವಿಶೇಷ ಕರ್ತವ್ಯಕ್ಕೆ ಹೋಗಲು ನಿರಾಕರಿಸಿದ ಆಪಾದನೆಯ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ 3 ತಿಂಗಳ ಕಾಲ ಮುಂದೂಡಿ ಆದೇಶ ಹೊರಡಿಸಿರುತ್ತಾರೆ. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಅರ್ಜಿದಾರರು ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ದಿನಾಂಕ: 19.5.2001 ರಂದು ತನ್ನ ಮಗಳ ಮದುವೆ ಇದ್ದುದರಿಂದ ಎಂ.ಎಂ. ಹಿಲ್ಸ್‌ಗೆ ಹೋಗಲು ಸಾಧ್ಯವಿಲ್ಲವೆಂದು ತಿಳಿಸಿರುವುದಾಗಿ ಅವರೇ ಒಪ್ಪಿಕೊಂಡಿರುತ್ತಾರೆ ಈ ಹಿನ್ನೆಲೆಯಲ್ಲಿ ಕರ್ತವ್ಯ ನಿರ್ಲಕ್ಷತೆ ತೋರಿಸಿರುವುದು ಸ್ಪಷ್ಟವಾಗಿದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 173 ಪೊಸಿಅ 2002, ಬೆಂಗಳೂರು ದಿನಾಂಕ: 25ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ನೀಲಕಂಠ, ಎಹೆಚ್‌ಸಿ 34, ಡಿಎಆರ್, ಗುಲ್ಬರ್ಗಾ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 1112

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ, (ಪೊಲೀಸ್ ಸೇವೆಗಳು).

**ವಿಷಯ :** ಶ್ರೀ ಚಿಕ್ಕಣ್ಣ, ಮಾಜಿ ಎಪಿಸಿ 1083, ಸಿಎಆರ್ (ಕೇಂದ್ರ), ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ :**

1. ಉಪ ಆರಕ್ಷಕ ಆಯುಕ್ತರು, ಸಿಎಆರ್(ಕೇಂದ್ರ), ಬೆಂಗಳೂರು ರವರ ಆದೇಶ ಸಂಖ್ಯೆ: ಡಿಇ: 48: 2001-02 ಅ.ಪು.ಸಂ. 26/2002-03 ದಿನಾಂಕ: 17.12.2002.
2. ಅಡಿಷನಲ್ ಪೊಲೀಸ್ ಕಮೀಷನರ್, ಸಿಎಆರ್ ಮತ್ತು ಆಡಳಿತ, ಬೆಂಗಳೂರು ರವರ ಆದೇಶ ಸಂಖ್ಯೆ: 5/ ಅಪೀಲು/2003 ಓಬಿ: 748/2003 ದಿನಾಂಕ: 17.6.2003.
3. ಅರ್ಜಿದಾರರ ಮನವಿ ದಿನಾಂಕ: 10.7.2003.
4. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು (2) 67/2002-03 ದಿನಾಂಕ: 15.12.2003.

**ಪ್ರಸ್ತಾವನೆ:**

ಶ್ರೀ ಚಿಕ್ಕಣ್ಣ, ಮಾಜಿ ಎಪಿಸಿ, ಸಿಎಆರ್ (ಕೇಂದ್ರ), ಬೆಂಗಳೂರು ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದಿನಾಂಕ: 18.10.2001 ರಿಂದ 21.11.2002 ರವರಿಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಆಪಾದನೆಯ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ), ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

ಅರ್ಜಿದಾರರ ಮೇಲಿನ ಆರೋಪ ಇಲಾಖಾ ವಿಚಾರಣೆಯಲ್ಲಿ ಸಾಬೀತಾದ್ದರಿಂದ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿದ್ದು, ಇವರ ಮೇಲ್ಮನವಿ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ತಿರಸ್ಕೃತವಾಗಿದೆ.

ಮೇಲ್ಕಂಡ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರು ಅನಾರೋಗ್ಯದಿಂದ ಬಳಲುತ್ತಿರುವುದಾಗಿ ಹೇಳಿರುತ್ತರಾದರೂ ತಮ್ಮ ಅನಾರೋಗ್ಯದ ಬಗ್ಗೆ ಮೇಲಧಿಕಾರಿಗಳಿಗೆ ಮಾಹಿತಿ ನೀಡದೇ ಹಾಗೂ ರಜಾ ಅರ್ಜಿಯನ್ನೂ ಸಹ ಕಳುಹಿಸದೇ ಇರುವುದು ಅಪರಾಧವಾಗಿರುತ್ತದೆ. ಅರ್ಜಿದಾರರು ನೀಡಿರುವ ಸಮಜಾಯಿಷಿಯನ್ನು ಒಪ್ಪಲು ಯಾವುದೇ ಸಮರ್ಥನೆ ಇಲ್ಲದಿದ್ದು, ಇವರ ಸೇವಾ ದಾಖಲೆಯನ್ನು ಪರಿಶೀಲಿಸಿದಲ್ಲಿ ಗೈರುಹಾಜರಿ ಹವ್ಯಾಸಿಯಾಗಿದ್ದು ತನ್ನ ತಪ್ಪನ್ನು ತಿದ್ದಿಕೊಳ್ಳುವಂತೆ ಕಂಡುಬರುವುದಿಲ್ಲ. ಆದರೂ ಇವರ ಸುದೀರ್ಘ ಸೇವೆಯನ್ನು ಗಮನದಲ್ಲಿರಿಸಿಕೊಂಡು ಮಾನವೀಯ ದೃಷ್ಟಿಯಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 6 ಪೊಸಿಅ 2004, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಚಿಕ್ಕಣ್ಣ, ಮಾಜಿ ಪಿಸಿ, ಸಿಎಆರ್(ಕೇಂದ್ರ), ಬೆಂಗಳೂರು ರವರಿಗೆ ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆಯನ್ನು ಭಾಗಶಃ ಮಾರ್ಪಡಿಸಿ, ಇವರನ್ನು ಸೇವೆಯಿಂದ ವಜಾ ಮಾಡುವ ಶಿಕ್ಷೆ ಬದಲಾಗಿ ಕಡ್ಡಾಯ ನಿವೃತ್ತಿ ಶಿಕ್ಷೆಯನ್ನು ಈ ಕೆಳಕಂಡ ಷರತ್ತುಗಳೊಂದಿಗೆ ವಿಧಿಸಲಾಗಿದೆ.

1. ಇದು ಶಿಸ್ತು ಪ್ರಾಧಿಕಾರಿ ಆದೇಶ ಹೊರಡಿಸಿದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

2. ಶಿಸ್ತು ಪ್ರಾಧಿಕಾರದ ಆದೇಶದ ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಈ ಆದೇಶವನ್ನು ಕರ್ನಾಟಕ ಲೋಕಸೇವಾ ಆಯೋಗ ಪತ್ರ ಪಿಎಸ್‌ಸಿ 23 ಸಿಎನ್‌ಎಸ್ 2004 ದಿನಾಂಕ: 17.6.2004ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 1113

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ, (ಪೊಲೀಸ್ ಸೇವೆಗಳು).

## KARNATAKA LEGISLATIVE COUNCIL SECRETARIAT

**Sub :** Participation of Sri V. R. Sudarshan, Hon'ble Chairman, Karnataka Legislative Council, in the attachment Programme (Study Tour) to be Organized by United Kingdom Branch of the Commonwealth Parliamentary Association from 25th to 27th October 2004 at London. Payment of advance TA & DA - Sanction reg.

**Read :**
1. Letter dated 16th September 2004, Overseas Office, House of Commons, London, SWIAOAA.
2. Itinerary of the Hon'ble Chairman, Karnataka Legislative Council.

**Preamble:**

The Commonwealth Parliamentary Association Secretariat, United Kingdom is running a project in favour of the Presiding Officers/ Secretaries to make Study Tours (Attachment Programme) to other Commonwealth Parliaments. Under the said project the Commonwealth Parliamentary Association of United Kingdom Branch has organized Attachment Programme (Study Tour) from 25th to 27th October 2004 at London. On behalf of the Commonwealth Parliamentary Association, Karnataka Branch, it was proposed to depute Sri. V. R. Sudharshan, Hon'ble Chairman, Karnataka Legislative Council, for participating in the Attachment Programme to be held at London. The Karnataka Legislative Council Secretariat will have to bear the entire expenditure in connection with this foreign tour. The total approximate expenditure in connection with the foreign tour will be as under.

| Name of the Participant | Air Fare | Airport tax | DA Including Personal Incidentals etc., | Total |
|---|---|---|---|---|
| Sri V. R. Sudharshan, Hon'ble Chairman, Karnataka Legislative Council. | 1,27,000 | 8,000.00 | 47,993.00 (1031.25 Dollars) | 1,82,993.00 |

The CPA Secretariat, United Kingdom, London will release an amount of 1000 Pounds (One Thousand Pounds) for this Attachment Programme and the same will be credited to the Head of Account "2011-02-103-01-041-Travel Expense-Reduction of Expenditure" after the release.

Hon'ble Special Board has approved the above proposal.

**ORDER No. KLCS/ADM-I/30/CPA/AP/2004, Bangalore, dated: 8th October, 2004**

Sanction is accorded for the Participation of Sri V. R. Sudharshan, Hon'ble Chairman, Karnataka Legislative Council, to attend the Attachment Programme to be held from 25th to 27th October, 2004. He is entitled to admissible amount of advance out of the estimated Travel expense of Rs.1,82,993.00 (One Lakh Eighty Two Thousand Nine hundred Ninty three only) subject to adjustment in the final Travelling Allowance bill. In addition to this if Sri. V. R. Sudharshan, Hon'ble Chairman, Karnataka Legislative Council, draws any cash Allowance from the Indian Embassy, the amount is recoverable on receipt of debit vouchers.

Expenditure on this account is debitable to the Head of Account "2011-02-102-0-01- Chairman (charged)-041 Travel Expenses".

By Order of the Special Board,

PR-1137

**K. MAHARAJAN**

Under Secretary, Karnataka Legislative Council.

## LAW SECRETARIAT

**Sub :** Appointment of Additional Public Prosecutor, Additional District and Sessions Judge's Court, Bidar, to conduct the Case in S. C. No. 82/04 on the file of the Principal District and Sessions Judge's Court, Bidar.

**Read :**
1. Letter No. DPN/ADM/100/04-05 dated 23-08-04 received from the Director of Prosecutions, Bangalore.
2. Order dated 29.9.04 in Criminal Petition No. 4432 of 2003 of the Hon'ble High Court of Karnataka, Bangalore, Communicated by the Hon'ble Registrar Judicial, High Court of Karnataka, Bangalore, in Letter No. R(J) 79/04 dated 1.10.04.

**ORDER No. LAW 2433 LGC 2004, Bangalore, dated: 6th October 2004**

Government are pleased to appoint the Additional Public Prosecutor, attached to the Additional District and Sessions Judge's Court, Bidar, as Special Public Prosecutor to conduct the Case in SC No.

82/04 (Counter Case of S.C.38/03) on the file of the Principal District and Sessions Judge, Bidar, with immediate effect.

By Order and in the name of the Governor of Karnataka,

PR-1138

**VINEETHA P. SHETTY**

I/c. Asst., Solicitor & Ex-Officio

Under Secretary, to Government, Law Department (Lit.IV).

**ಶಿಕ್ಷಣ ಸಚಿವಾಲಯ**

**ವಿಷಯ :** ಶ್ರೀ ಗೌಡಪ್ಪ ಬಸಪ್ಪ, ನಿವೃತ್ತ ಪ್ರಾಂಶುಪಾಲರು, ಸರ್ಕಾರಿ ಪದವಿಪೂರ್ವ ಕಾಲೇಜು ಬೀಮರಾಯನಗುಡಿ ಅವರಿಗೆ ತಡವಾಗಿ ಪಾವತಿ ಆದ ನಿವೃತ್ತಿ ಉಪದಾನ ಮತ್ತು ಪರಿವರ್ತಿತ ನಿವೃತ್ತಿ ವೇತನದ ಮೇಲೆ ಬಡ್ಡಿ ನೀಡುವ ಬಗ್ಗೆ ಆದೇಶಗಳು.

**ಓದಲಾಗಿದೆ :** 1. ದಿನಾಂಕ: 31.10.1996ರ ಆದೇಶಸಂಖ್ಯೆ: ಇಡಿ 3 ಡಿಜಿಪಿ 96

2. ನಿಂದನಾ ಅರ್ಜಿ ಸಂಖ್ಯೆ: 511:96 ರಲ್ಲಿ ಕೆಎಟಿಯ ದಿನಾಂಕ: 5.2.1997ರ ಆದೇಶ

**ಪ್ರಸ್ತಾವನೆ:**

ಕೆಎಟಿ ಅರ್ಜಿಸಂಖ್ಯೆ: 5521:95ರಲ್ಲಿ ದಿನಾಂಕ: 18.12.1995ರಲ್ಲಿ ನೀಡಿದ ತೀರ್ಪಿನನ್ವಯ ಶ್ರೀ ಗೌಡಪ್ಪ ಬಸಪ್ಪ, ನಿವೃತ್ತ ಪ್ರಾಂಶುಪಾಲರು, ಸರ್ಕಾರಿ ಪದವಿಪೂರ್ವ ಕಾಲೇಜು, ಬೀಮರಾಯನಗುಡಿ ಇವರಿಗೆ ತಡವಾಗಿ ಪಾವತಿ ಆದ ನಿವೃತ್ತಿ ಉಪದಾನ ಮತ್ತು ಪರಿವರ್ತಿತ ನಿವೃತ್ತಿ ವೇತನದ ಮೊತ್ತದ ಮೇಲೆ ದಿನಾಂಕ: 1.2.1995 ರಿಂದ 30.11.1995ರ ವರೆಗೆ ಶೇಕಡ 12ರಂತೆ ಬಡ್ಡಿಯನ್ನು ಲೆಕ್ಕ ಹಾಕಿ ರೂ. 2058-00 ಗಳನ್ನು ಮೇಲೆ ಓದಲಾದ ಕ್ರಮಸಂಖ್ಯೆ (1)ರ ದಿನಾಂಕ: 31.10.1996ರ ಆದೇಶದಲ್ಲಿ ಪಾವತಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು.

ನ್ಯಾಯಾಲಯದ ಆದೇಶದಂತೆ ಬಡ್ಡಿ ಪಾವತಿಸಿಲ್ಲವೆಂದು ಶ್ರೀ ಗೌಡಪ್ಪ ಬಸಪ್ಪ ಅವರು ಕೆಎಟಿ ಯಲ್ಲಿ ನಿಂದನಾ ಅರ್ಜಿಸಂಖ್ಯೆ: 511: 96 ದಾಖಲಿಸಿದ್ದರು. ಮಾನ್ಯ ನ್ಯಾಯಾಲಯವು ಈ ನಿಂದನಾ ಅರ್ಜಿಯನ್ನು ಪುರಸ್ಕರಿಸಿ ದಿನಾಂಕ: 5.2.1997ರಂದು ನೀಡಿದ ಆದೇಶದಲ್ಲಿ ಅರ್ಜಿದಾರರ ಡೂಪ್ಲಿಕೇಟ್ ಸೇವಾಪುಸ್ತಕವನ್ನು ತಯಾರಿಸಿ ಅರ್ಹತಾದಾಯಕ ಸೇವೆಯನ್ನು ನಿಗದಿಪಡಿಸಿ, ಅದರಂತೆ ಪೂರ್ಣ ನಿವೃತ್ತಿ ವೇತನವನ್ನು ಪಾವತಿಸಲು ಹಾಗೂ ಶೇಕಡ 12 ರಂತೆ ಬಡ್ಡಿ ಪಾವತಿಸುವಂತೆ ಆದೇಶಿಸಿ ಅರ್ಜಿಯನ್ನು ಇತ್ಯರ್ಥಗೊಳಿಸಿತ್ತು. ಮಹಾಲೇಖಪಾಲರು ದಿನಾಂಕ: 17.10.2003ರ ಪತ್ರದಲ್ಲಿ ಅರ್ಜಿದಾರರ ನಿವೃತ್ತಿ ಸೌಲಭ್ಯಗಳನ್ನು 15.2.1996 ರಿಂದ ಬಿಡುಗಡೆ ಮಾಡಿರುವುದಾಗಿ ತಿಳಿಸಿರುತ್ತಾರೆ. ಮಹಾಲೇಖಪಾಲರು ನಿವೃತ್ತಿ ಸೌಲಭ್ಯಗಳನ್ನು ಪರಿಷ್ಕರಿಸಿದ ಹಿನ್ನೆಲೆಯಲ್ಲಿ ಅರ್ಜಿದಾರರಿಗೆ ಬಾಕಿ ಉಪದಾನದ ಮೊತ್ತ ರೂ. 75,488-00 (ಪ್ರಾಧೀಕರಿಸಿದ ದಿನಾಂಕ: 15.2.1996) ದಿನಾಂಕ: 1.2.1995 ರಿಂದ 31.1.1996ರ ವರೆಗೆ ಶೇಕಡ 12ರ ದರದಲ್ಲಿ ಬಡ್ಡಿಯನ್ನು ಹಾಗೂ ಬಾಕಿ ಪಿಂಚಣಿ ಮೊತ್ತ ರೂ. 2,288-00 ಕ್ಕೆ (ಪ್ರಾಧೀಕರಿಸಿದ ದಿನಾಂಕ: 15.2.1996) ದಿನಾಂಕ: 1.2.1995 ರಿಂದ ದಿನಾಂಕ: 31.1.1996ರ ವರೆಗೆ ಮಾಹೆಯಾನ ಇಳಿಮುಖ ದರದಲ್ಲಿ ಶೇಕಡ 12 ರಂತೆ ಬಡ್ಡಿ ಪಾವತಿಸಲು ಹಾಗೂ ಹಿಂದೆ ಪಾವತಿಸಿದ ರೂ. 2,058-00 ಗಳ ಬಡ್ಡಿಯನ್ನು ಮುರಿದುಕೊಂಡು ಉಳಿದ ಮೊತ್ತವನ್ನು ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 3 ಡಿಜಿಪಿ 96, ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಗೌಡಪ್ಪ ಬಸಪ್ಪ, ನಿವೃತ್ತ ಪ್ರಾಂಶುಪಾಲರು ಸರ್ಕಾರಿ ಪದವಿಪೂರ್ವ ಕಾಲೇಜು, ಬೀಮರಾಯನಗುಡಿ ಇವರಿಗೆ ಸರ್ಕಾರಿ ಆದೇಶ ಸಂಖ್ಯೆ: ಆಇ(ವಿ) 199 ಪಿಇಎನ್ 93 ದಿನಾಂಕ: 13.9.1994ರ ಕಂಡಿಕೆ 6 ಮತ್ತು 7 ರಲ್ಲಿನ ಷರತ್ತುಗಳನ್ವಯ ವಿಳಂಬವಾಗಿ ಪಾವತಿಸಲಾದ ಪಿಂಚಣಿ ಸೌಲಭ್ಯಗಳಿಗೆ ಈ ಕೆಳಕಂಡಂತೆ ಬಡ್ಡಿ ಮಂಜೂರು ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಬಾಕಿ ಉಪದಾನ ಮೊತ್ತ ರೂ. 75,488-00ಕ್ಕೆ ದಿನಾಂಕ: 1.2.1995 ರಿಂದ 31.1.1996ರ ವರೆಗೆ ಶೇಕಡ 12ರ ದರದಲ್ಲಿ ಬಡ್ಡಿ.

ಬಾಕಿ ಪಿಂಚಣಿ ಮೊತ್ತ ರೂ. 2,288-00ಕ್ಕೆ ದಿನಾಂಕ: 1.2.1995 ರಿಂದ 31.1.1996 ರವರೆಗೆ ಮಾಹೆಯಾನ ಇಳಿಮುಖ ದರದಲ್ಲಿ ಶೇಕಡ 12ರ ದರದಲ್ಲಿ ಬಡ್ಡಿ

ಮೇಲ್ಕಂಡ ಬಡ್ಡಿ ಮೊತ್ತದಲ್ಲಿ ದಿನಾಂಕ: 31.10.1996ರ ಸರ್ಕಾರಿ ಆದೇಶಸಂಖ್ಯೆ: ಇಡಿ 3 ಡಿಜಿಪಿ 96 ರಲ್ಲಿ ಮಂಜೂರು ಮಾಡಿದ ರೂ. 2,058-00ಗಳನ್ನು ಮುರಿದುಕೊಂಡು ಉಳಿದ ಮೊತ್ತವನ್ನು ಪಾವತಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ) ಅವರ ಟಿಪ್ಪಣಿ ಸಂಖ್ಯೆ: ಆಇ(ಇ) 1794:04 (ಪಿ) (ಪಿ.ನಂ. 7400), ದಿನಾಂಕ: 2.8.2004ರಲ್ಲಿ ನೀಡಿದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್. ಆರ್. ಸಂಬರಗಿ**

ಪಿ.ಆರ್. 1139

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು 1,2).

**ವಿಷಯ :** ಡಾ: ಸಿ. ಲಕ್ಷ್ಮೀನಾರಾಯಣ ರೆಡ್ಡಿ, ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಿಕ್ಕಬಳ್ಳಾಪುರ ಇವರಿಗೆ ನೇಮಕಾತಿ ಪೂರ್ವದಲ್ಲಿ ಎಂ.ಫಿಲ್/ಪಿ.ಹೆಚ್.ಡಿ. ಪದವಿ ಹೊಂದಿರುವುದಕ್ಕೆ ಮುಂಗಡ ವೇತನ ಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ :** 1. ಕಾಶಿನಿ 15 ಹವೇಬ 96 ಸಿವಿ-2 ದಿನಾಂಕ: 5.10.96

2. ಕಾಲೇಜು ಶಿಕ್ಷಣ ಆಯುಕ್ತರ ಕಡತ ಸಂಖ್ಯೆ: ಕಾಶಿಆ 48 ಮುವೇಬ 01 ಸಿವಿ-3.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಕಾಲೇಜು ಶಿಕ್ಷಣ ಆಯುಕ್ತರ ಆದೇಶದಲ್ಲಿ ಡಾ: ಸಿ. ಲಕ್ಷ್ಮೀನಾರಾಯಣರೆಡ್ಡಿ, ಅರ್ಥಶಾಸ್ತ್ರ ಉಪನ್ಯಾಸಕರು ಇವರು ದಿನಾಂಕ: 13.07.96ರಲ್ಲಿ ರೂ. 2,200-00ರ ವೇತನ ಶ್ರೇಣಿಯಲ್ಲಿ ಸೇವೆಗೆ ಸೇರಿದ್ದು, ಇವರು ಸೇವೆಗೆ ಸೇರುವ ಮೊದಲೇ ಪಿಹೆಚ್‌ಡಿ ಪದವಿಯನ್ನು ಹೊಂದಿರುವುದರಿಂದ 1986ರ ಯು.ಜಿ.ಸಿ ನಿಯಮಾವಳಿಗಳ ಪ್ರಕಾರ 3 ಮುಂಗಡ ವೇತನ ಬಡ್ತಿಗಳನ್ನು ರೂ.75/-ರ ದರದಲ್ಲಿ ಅವರು ಸೇವೆಗೆ ಸೇರಿದ ದಿನಾಂಕದಿಂದ ಅನ್ವಯಿಸಿ ಮಂಜೂರು ಮಾಡಲಾಗಿರುತ್ತದೆ. ಮೇಲೆ (2)ರಲ್ಲಿ ಓದಲಾದ ಕಾಲೇಜು ಶಿಕ್ಷಣ ಆಯುಕ್ತರ ಪತ್ರದಲ್ಲಿ ಡಾ: ಸಿ. ಲಕ್ಷ್ಮೀನಾರಾಯಣರೆಡ್ಡಿ, ಅವರು ಸರ್ಕಾರಿ ಆದೇಶ ಸಂಖ್ಯೆ: ಇಡಿ 188 ಡಿಸಿಇ 99ರ ಪ್ರಕಾರ ಪರಿಷ್ಕೃತ ದರದಲ್ಲಿ ರೂ. 275/- ರಂತೆ ಮುಂಗಡ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಕೋರಿರುವ ಹಿನ್ನೆಲೆಯಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಸರ್ಕಾರದ ಮಾರ್ಗದರ್ಶನ ಕೋರಿರುತ್ತಾರೆ.

2. ಸರ್ಕಾರವು ಈ ಬಗ್ಗೆ ಪರಿಶೀಲಿಸಿ ಡಾ: ಸಿ. ಲಕ್ಷ್ಮೀನಾರಾಯಣರೆಡ್ಡಿ, ಇವರು ನೇಮಕಾತಿ ಪೂರ್ವದಲ್ಲಿ ಡಾಕ್ಟರೇಟ್ ಪದವಿಯನ್ನು ಹೊಂದಿರುವ ಪ್ರಯುಕ್ತ ಅವರ ವೇತನವನ್ನು ದಿನಾಂಕ: 15.11.99ರ ಆದೇಶದ ಕಂಡಿಕೆ 7ರ ಮೇರೆಗೆ ನಾಲ್ಕು ಮುಂಗಡ ವೇತನ ಬಡ್ತಿಗಳ ಸೌಲಭ್ಯದೊಂದಿಗೆ ಹಾಗೂ ಪರಿಷ್ಕೃತ ವೇತನ ಬಡ್ತಿಗಳ ಸೌಲಭ್ಯದೊಂದಿಗೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಪುನರ್ ನಿಗದಿಕರಿಸಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 71 ಡಿಸಿಇ 2003 ಬೆಂಗಳೂರು ದಿನಾಂಕ: 4ನೇ ಅಕ್ಟೋಬರ್ 2004**

3. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಸಿ. ಲಕ್ಷ್ಮೀನಾರಾಯಣರೆಡ್ಡಿ, ಉಪನ್ಯಾಸಕರು ಇವರು ನೇಮಕಾತಿ ಪೂರ್ವದಲ್ಲಿ ಡಾಕ್ಟರೇಟ್ ಪದವಿಯನ್ನು ಹೊಂದಿರುವುದರಿಂದ ಅವರ ವೇತನವನ್ನು ದಿನಾಂಕ: 13.07.96 ರಿಂದ ಅನ್ವಯವಾಗುವಂತೆ ದಿನಾಂಕ: 15.11.99ರ ಪುನರ್ ಪರಿಷ್ಕೃತ ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ನಾಲ್ಕು ಮುಂಗಡ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಸರ್ಕಾರವು ಆದೇಶಿಸಿದೆ.

4. ಉಪನ್ಯಾಸಕರಿಗೆ ಸಲ್ಲಬೇಕಾದ ಆರ್ಥಿಕ ಸೌಲಭ್ಯವು ಸರ್ಕಾರಿ ಆದೇಶ ಸಂಖ್ಯೆ: ಇಡಿ 188 ಡಿಸಿಇ 99 ದಿನಾಂಕ: 15.11.99 ರಂತೆ ದಿನಾಂಕ: 15.11.99ರ ಕಂಡಿಕೆ 7 ರನ್ವಯ ಲಭ್ಯವಾಗುತ್ತದೆ.

5. ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 1145 ವೆಚ್ಚ-8/ 2004 ದಿನಾಂಕ: 15.07.2004ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿಜಾಯ್ಸ್**

ಪಿ.ಆರ್. 1142 ಸರ್ಕಾರದ ಉಪ ಕಾರ್ಯದರ್ಶಿ-4, ಶಿಕ್ಷಣ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ವೈ. ಎಂ. ಮರಿಯಪ್ಪ, ಹಿಂದಿನ ತಹಸೀಲ್ದಾರ್, ಗೋಕಾಕ್ ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕುರಿತು ಶ್ರೀ ವೈ. ಎಂ. ಮರಿಯಪ್ಪ ಇವರನ್ನು ಆರೋಪ ಮುಕ್ತರನ್ನಾಗಿಸುವ ಬಗ್ಗೆ ಆದೇಶ.

**ಓದಲಾಗಿದೆ :**
1. ದಿನಾಂಕ: 19.3.92ರ ಸರ್ಕಾರಿ ಆದೇಶ ಸಂಖ್ಯೆ ಕಂಇ 94 ಎಡಿಇ 90.
2. ವಿಚಾರಣಾಧಿಕಾರಿ ಹಾಗೂ ಜಿಲ್ಲಾಧಿಕಾರಿ, ಬೆಳಗಾವಿ ಜಿಲ್ಲೆ ಇವರ ದಿನಾಂಕ: 19.2.96 ರ ವಿಚಾರಣಾ ವರದಿ ಸಂಖ್ಯೆ ಆರ್‌ಬಿ: ಇಎಸ್‌ಟಿ:1: ಸಿಆರ್:15: 93-94
3. ದಿನಾಂಕ: 3.6.97ರ ನೋಟೀಸು ಸಂಖ್ಯೆ ಕಂಇ 94 ಎಡಿಇ 90.
4. ಶ್ರೀ ವೈ. ಎಂ. ಮರಿಯಪ್ಪ, ನಿವೃತ್ತ ತಹಸೀಲ್ದಾರ್ ಇವರ ದಿನಾಂಕ: 26.6.97ರ ಲಿಖಿತ ಸಮಜಾಯಿಷಿ.

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನಲ್ಲಿ 1982 ರಿಂದ 1986 ರವರೆಗೆ ಕಾರ್ಯನಿರ್ವಹಿಸುತ್ತಿದ್ದ ಇತರ ಅಧಿಕಾರಿ: ನೌಕರರೊಂದಿಗೆ ಶ್ರೀ ವೈ. ಎಂ. ಮರಿಯಪ್ಪ, ಹಿಂದಿನ ತಹಸೀಲ್ದಾರ್, ಗೋಕಾಕ್, ಪ್ರಸ್ತುತ ನಿವೃತ್ತರು ಇವರು ಸರ್ಕಾರಿ ಹಣ ದುರುಪಯೋಗ ಪಡಿಸಿರುವರೆಂಬ ಆರೋಪಗಳಿಗೆ ಸಂಬಂಧಿಸಿದಂತೆ, ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 19.3.92ರ ಸರ್ಕಾರಿ ಆದೇಶದಲ್ಲಿ ಬೆಳಗಾವಿ ವಿಭಾಗಾಧಿಕಾರಿಯವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರಂತೆ ವಿಚಾರಣಾಧಿಕಾರಿಯ ಪರವಾಗಿ ಬೆಳಗಾವಿ ಜಿಲ್ಲಾಧಿಕಾರಿಯವರು ವಿಚಾರಣೆಯನ್ನು ನಡೆಸಿ, ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 19.2.1996ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಅದರಂತೆ ಶ್ರೀ ವೈ. ಎಂ. ಮರಿಯಪ್ಪ ಇವರ ವಿರುದ್ಧ ಮಾಡಿರುವ ಏಳು ಆರೋಪಗಳ ಪೈಕಿ ಒಂದು ಆರೋಪ ಮಾತ್ರ ಸಾಬೀತಾಗಿರುವುದಾಗಿ ವಿಚಾರಣಾ ವರದಿಯಿಂದ ವೇದ್ಯವಾಗಿರುತ್ತದೆ. ಸದರಿ ವಿಚಾರಣಾ ವರದಿಯ ಬಗ್ಗೆ ಶ್ರೀ ವೈ. ಎಂ. ಮರಿಯಪ್ಪ ಇವರ ಸಮಜಾಯಿಷಿ ಏನಾದರೂ ಇದ್ದರೆ ಅದನ್ನು ಲಿಖಿತ ರೂಪದಲ್ಲಿ ಸರ್ಕಾರಕ್ಕೆ ಸಲ್ಲಿಸುವಂತೆ ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 3.6.1997ರ ನೋಟೀಸಿನಲ್ಲಿ ಸೂಚಿಸಲಾಗಿತ್ತು. ಅದಕ್ಕನುಗುಣವಾಗಿ ಸದರಿ ಆರೋಪಿತ ಅಧಿಕಾರಿಯು ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ: 26.6.97ರ ಲಿಖಿತ ಸಮಜಾಯಿಷಿಯಲ್ಲಿ ತಾವು ಸೇವೆಯಿಂದ ನಿವೃತ್ತರಾಗಿದ್ದು, ಹೆಚ್ಚಿನ ಆರ್ಥಿಕ ಮುಗ್ಗಟ್ಟಿನಿಂದ ತೊಂದರೆ ಅನುಭವಿಸುತ್ತಿರುವುದಾಗಿ ತಿಳಿಸಿ, ಸದರಿ ಆರೋಪಗಳಿಂದ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ,

ಶ್ರೀ ವೈ. ಎಂ. ಮರಿಯಪ್ಪ, ಇವರು ಸೇವಾ ನಿವೃತ್ತಿ ಹೊಂದಿರುವುದರಿಂದ, ಇವರನ್ನು ಈ ಪ್ರಕರಣದಲ್ಲಿ ಆರೋಪಮುಕ್ತರನ್ನಾಗಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 94 ಎಡಿಇ 90, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2004**

ಶ್ರೀ ವೈ. ಎಂ. ಮರಿಯಪ್ಪ, ಹಿಂದಿನ ತಹಸೀಲ್ದಾರ್, ಗೋಕಾಕ್ ತಾಲ್ಲೂಕು ಇವರು ದಿನಾಂಕ: 31.8.1988 ರಂದು ಸೇವಾ ನಿವೃತ್ತಿ ಹೊಂದಿದ್ದು, ಈ ಘಟನೆಯು 1982-84 ರಲ್ಲಿ ನಡೆದಿರುವುದರಿಂದ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ದಿನಾಂಕ: 19.3.92 ರಲ್ಲಿ ಆದೇಶಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರನ್ವಯ ಆಸ್ಪದವಿರುವುದಿಲ್ಲ. ಇವರ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಒಂದು ಆರೋಪ ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಯವರು ಅಭಿಪ್ರಾಯಪಟ್ಟಿದ್ದರೂ ಸಹಾ ವಾಸ್ತವಿಕವಾಗಿ ಶ್ರೀ ವೈ. ಎಂ. ಮರಿಯಪ್ಪ ರವರಿಗೆ ದಂಡನೆ ವಿಧಿಸಲು ನಿಯಮಗಳಡಿ ಆಸ್ಪದವಿರುವುದಿಲ್ಲ. ಆದುದರಿಂದ, ಇವರ ವಿರುದ್ಧ ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 19.3.1992ರ ಸರ್ಕಾರಿ ಆದೇಶದಲ್ಲಿ ಮಾಡಲಾದ ಆರೋಪಗಳಿಂದ ಇವರನ್ನು ಮುಕ್ತರನ್ನಾಗಿಸಿ ಇವರ ವಿರುದ್ಧದ ಇಲಾಖಾ ವಿಚಾರಣೆ ಕೈಬಿಡಲು ಆದೇಶಿಸಿದೆ. ಈ ಪ್ರಕರಣದ ಮಟ್ಟಿಗೆ ಶ್ರೀ ವೈ. ಎಂ. ಮರಿಯಪ್ಪ, ಇವರ ವಿರುದ್ಧ ಈ ವಿಚಾರಣೆ ನಡೆಯದಿದ್ದಲ್ಲಿ ಇವರು ಯಾವ ಸೌಲಭ್ಯವನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್. 1146 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

**ವಿಷಯ :** ಶ್ರೀ ಟಿ. ಎಲ್. ನಾಯಕ್, ತಹಶೀಲ್ದಾರ್, ಮುಂಡರಗಿ ತಾಲ್ಲೂಕು, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ, ಗದಗ್ ಇವರ ಅ.ಸ. ಪತ್ರ ಸಂಖ್ಯೆ: ಇಎಸ್‌ಟಿ (1) ಸಿಆರ್ 20: 04-05, ದಿನಾಂಕ: 4.9.2004.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 4.9.2004 ರ ಅ.ಸ. ಪತ್ರದಲ್ಲಿ ಗದಗ್ ಜಿಲ್ಲೆಯ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುತ್ತಾ, ಮುಂಡರಗಿ ತಾಲ್ಲೂಕು ತಹಶೀಲ್ದಾರ್‌ರಾದ ಶ್ರೀ ಟಿ. ಎಲ್. ನಾಯಕ್, ಇವರು ಮುಂಡರಗಿ ತಾಲ್ಲೂಕಿನ ಗಂಗಾಪುರ ಗೋಶಾಲೆಯ ನಿರ್ವಹಣೆಯಲ್ಲಿ ಹಾಗೂ ಗೋಶಾಲೆಗೆ ಮೇವು ಖರೀದಿ ಮಾಡಿರುವ ವ್ಯವಹಾರದಲ್ಲಿ ಅವ್ಯವಹಾರ ಮಾಡಿದ ಬಗ್ಗೆ ಗದಗ್ ಉಪ ವಿಭಾಗಾಧಿಕಾರಿಗಳ ನೇತೃತ್ವದ ತಂಡದಿಂದ ತನಿಖೆ ನಡೆಸಿ, ಪಡೆದಿರುವ ವರದಿ ಹಾಗೂ ಸಂಬಂಧಪಟ್ಟ ದಾಖಲೆಗಳ ಪ್ರತಿಗಳನ್ನು ಸರಕಾರಕ್ಕೆ ಕಳುಹಿಸಿ, ಶ್ರೀ ಟಿ. ಎಲ್. ನಾಯಕ್, ತಹಶೀಲ್ದಾರ್, ಮುಂಡರಗಿ ಇವರ ವಿರುದ್ಧ ಸರ್ಕಾರದ ಹಣ ದುರುಪಯೋಗ ಹಾಗೂ ಕರ್ತವ್ಯಲೋಪಗಳನ್ನು ಸರಕಾರಕ್ಕೆ ತಿಳಿಸಿರುತ್ತಾರೆ.

ಮುಂದುವರೆದು, ಸದರಿ ಗೋಶಾಲೆಯಲ್ಲಿ ನಡೆದ ಮೇವು ಖರೀದಿಯ ಹಣ ಪಾವತಿಸುವಂತೆ ಜಿಲ್ಲಾಧಿಕಾರಿಗಳಿಗೆ ದಿನಾಂಕ: 1.9.04 ರಂದು ಉದ್ಧಟತನದ ಪತ್ರ ಬರೆದು, ಒಬ್ಬ ಸರ್ಕಾರಿ ನೌಕರನಿಗೆ ತಕ್ಕದಲ್ಲದ ರೀತಿಯಲ್ಲಿ ವರ್ತಿಸಿ, ಕೆ.ಸಿ.ಎಸ್ (ನಡತೆ) ನಿಯಮಾವಳಿಗಳನ್ನು ಉಲ್ಲಂಘಿಸಿದ್ದಾಗಿ ತಿಳಿಸುತ್ತಾ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮತ್ತು ಅವರ ಅಸಮಂಜಸ ಹಾಗೂ ಅತೃಪ್ತಿಕರ ಕಾರ್ಯನಿರ್ವಹಣೆಯಿಂದಾಗಿ ಮುಂಡರಗಿ ತಾಲ್ಲೂಕಿನಲ್ಲಿ ಕಾನೂನು ಮತ್ತು ವ್ಯವಸ್ಥೆ ಹದಗೆಡುವ ಎಲ್ಲಾ ಸಾಧ್ಯತೆ ಇರುವುದರಿಂದ, ಅವರನ್ನು ಬೇರೆ ಜಿಲ್ಲೆಗೆ ವರ್ಗ ಮಾಡುವಂತೆಯೂ ಕೋರಿದ್ದಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದ್ದು, ಶ್ರೀ ಟಿ. ಎಲ್. ನಾಯಕ್, ತಹಶೀಲ್ದಾರ್ ಇವರ ವಿರುದ್ಧದ ಆರೋಪಗಳು ಗಂಭೀರ ಸ್ವರೂಪದ್ದವುಗಳಾಗಿರುವುದರಿಂದ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 69 ಎಡಿಇ 2004, ಬೆಂಗಳೂರು ದಿನಾಂಕ: 11ನೇ ಅಕ್ಟೋಬರ್ 2004**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ. ಎಲ್. ನಾಯಕ್, ತಹಶೀಲ್ದಾರ್, ಮುಂಡರಗಿ ತಾಲ್ಲೂಕು, ಗದಗ್ ಜಿಲ್ಲೆ, ಇವರನ್ನು ಅವರ ವಿರುದ್ಧದ ಇಲಾಖಾ ವಿಚಾರಣೆ ಕಾಯ್ದಿರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಆರೋಪಿತ ಅಧಿಕಾರಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ, ಗದಗ್ ಇವರ ಅನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಾಜ್ ಅಹ್ಮದ್ ಷರೀಫ್**

ಪಿ.ಆರ್. 1147 ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯದ ಕರಳು ಶಸ್ತ್ರಚಿಕಿತ್ಸಾ ಶಾಸ್ತ್ರ ವಿಭಾಗದಲ್ಲಿ ಫೆಲೋಶಿಪ್ ಪ್ರಾರಂಭ.

**ಉಲ್ಲೇಖ :** 1. ದಿನಾಂಕ: 6.1.2003, ಸಂಖ್ಯೆ: ಎಸಿಎ: ಸಿಡಿಸಿ: ಎಸ್‌ಜೀ: 2002-2003ರ ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿಸೂಚನೆ.

2. ದಿನಾಂಕ: 30.03.2003, 22.5.2003, 10.5.2004 ಮತ್ತು ದಿನಾಂಕ: 19.07.2004, ಸಂಖ್ಯೆ: ಎಂಇಹೆಚ್ (1) 46:2002-2003ರ ವೈದ್ಯಕೀಯ ಶಿಕ್ಷಣ ನಿರ್ದೇಶಕರವರ ಪತ್ರ.

**ಪೀಠಿಕೆ:**

1. ದಿನಾಂಕ: 6.1.2003ರ ಅಧಿಸೂಚನೆಯಲ್ಲಿ ರಾಜೀವ್‌ಗಾಂಧಿ ಆರೋಗ್ಯ ವಿಶ್ವವಿದ್ಯಾಲಯ ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ 2002-2003ನೇ ಶೈಕ್ಷಣಿಕ ಸಾಲಿನಿಂದ ಎರಡು ವಿದ್ಯಾರ್ಥಿಗಳ ಪ್ರವೇಶ ಮಿತಿಯೊಂದಿಗೆ ಸರ್ಜಿಕಲ್ ಗ್ಯಾಸ್ಟ್ರೋ ಎಂಟ್ರಾಲಜಿಯಲ್ಲಿ ಫೆಲೋಶಿಪ್ ಕಾರ್ಯಕ್ರಮ ಪ್ರಾರಂಭಿಸಲು ಅನುಮತಿ ನೀಡಿದೆ. ವೈದ್ಯಕೀಯ ಶಿಕ್ಷಣ ನಿರ್ದೇಶಕರು ಬೆಂಗಳೂರು ವೈದ್ಯಕೀಯ ಕಾಲೇಜಿನ ಕರಳು ಶಸ್ತ್ರಚಿಕಿತ್ಸಾ ವಿಭಾಗದಲ್ಲಿ ಫೆಲೋಶಿಪ್ ಕಾರ್ಯಕ್ರಮವು ಮುಂದುವರಿದ ಯೋಜನಾ ಕಾರ್ಯಕ್ರಮದ ಅಡಿಯಲ್ಲಿ ಬರುವುದಿಲ್ಲ ಎಂದು ತಿಳಿಸಿ ಸದರಿ ಫೆಲೋಶಿಪ್ ಕಾರ್ಯಕ್ರಮವನ್ನು ಇಬ್ಬರು ಅಭ್ಯರ್ಥಿಗಳ ಪ್ರವೇಶದೊಂದಿಗೆ 2004-2005ನೇ ಸಾಲಿನಲ್ಲಿ ಪ್ರಾರಂಭಿಸಲು ಸರ್ಕಾರದ ಆದೇಶ ಹೊರಡಿಸಲು ಕೋರಿದ್ದಾರೆ.

2. ಸದರಿ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆ ಹಾಗೂ ಯೋಜನಾ ಇಲಾಖೆಯೊಂದಿಗೆ ಸಮಾಲೋಚಿಸಿ ಪ್ರಸಕ್ತ ಸಾಲಿನ ಹೊಸ ಸೇವೆ ಎಂದು ಪರಿಗಣಿಸಿ 2004-2005ನೇ ಶೈಕ್ಷಣಿಕ ಸಾಲಿನಿಂದ ಪ್ರಾರಂಭಿಸಲು ಸರ್ಕಾರ ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 586 ಎಂಪಿಎಸ್ 2004, ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2004**

3. ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ 2004-2005ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಕರಳು ಶಸ್ತ್ರಚಿಕಿತ್ಸಾ ವಿಭಾಗದಲ್ಲಿ ಫೆಲೋಶಿಪ್ ಕಾರ್ಯಕ್ರಮವನ್ನು ಎರಡು ವಿದ್ಯಾರ್ಥಿಗಳ ಪ್ರವೇಶಮಿತಿಯೊಂದಿಗೆ ಪ್ರಾರಂಭಿಸಲು ಸರ್ಕಾರವು ಈ ಕೆಳಕಂಡ ಷರತ್ತಿಗೊಳಪಟ್ಟು ಮಂಜೂರಾತಿ ನೀಡಿದೆ.

(1) Stipend of Rs.5,720 (Rupees Five Thousand Seven Hundred & Twenty Only) will be paid to the selected candidates on par with 1st and 2nd Year PG Medical Students.

(2) Selection should be done through open advertisement by following the Rules Governing Fellowship Programme of Rajiv Gandhi University of Health Sciences in terms of RGUHS Rules governing Fellowship Programme.

(3) M. S. General Surgery qualified candidates are eligible to apply.

(4) Maximum age limit is 35 years. It is relaxable upto 40 years to be decided by the committee constituted by Rajiv Gandhi University of Health Sciences by Rules governing Fellowship Programme of RGUHS.

(5) The selected candidates shall execute Bond in Form No. 19 appended to Karnataka Civil Services Rules and deposit their original Marks Card, Degree Certificates etc. In case the candidate fails to complete the Fellowship or withdraws from the Fellowship in the middle of the fellowship period he shall pay a fine of Ten Thousand Rupees and entire stipend amount drawn by him shall be recovered from him.

4. ದಿನಾಂಕ: 5.8.2003 ಸಂಖ್ಯೆ: ಆಈ 1225 ವೆಚ್ಚ (5) 2003ರ ಅನಧಿಕೃತ ಟಿಪ್ಪಣಿಯಲ್ಲಿ ಮತ್ತು 30.6.2004, ಸಂಖ್ಯೆ: ಯೋಇ 111 ಜಶ 2003ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಮತ್ತು ಯೋಜನಾ ಇಲಾಖೆಯ ಸಹಮತಿ ಪಡೆದು ಈ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾಗರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

ಪಿ.ಆರ್. 1149

## ಕಾನೂನು ಸಚಿವಾಲಯ

**ವಿಷಯ :** ಗದಗ ಜಿಲ್ಲೆ ರೋಣದ ಸಿವಿಲ್ ನ್ಯಾಯಾಧೀಶರ (ಹಿರಿಯ ವಿಭಾಗ) ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಲಾ 98 ಎಲ್‌ಸಿಇ 2003, ದಿನಾಂಕ: 21.10.2003

2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರಸಂಖ್ಯೆ: ಜಿಒಬಿ 2:221:2004, ದಿನಾಂಕ: 9.8.2004.

**ಪ್ರಸ್ತಾವನೆ:**

ಗದಗ ಜಿಲ್ಲೆ ರೋಣದ ಸಿವಿಲ್ ನ್ಯಾಯಾಧೀಶರ (ಹಿರಿಯ ವಿಭಾಗ) ನ್ಯಾಯಾಲಯವನ್ನು ಸೃಜಿಸಲು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈಗ ಈ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 20.10.2004 ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯದಲ್ಲಿ ಬಹಳಷ್ಟು ಪ್ರಕರಣಗಳು ಬಾಕಿ ಇರುವುದರಿಂದ ಸದರಿ ನ್ಯಾಯಾಲಯವನ್ನು ಅದರ ಪ್ರಿಸೈಡಿಂಗ್ ಅಧಿಕಾರಿ ಮತ್ತು ಪೂರಕ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 21.10.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 86 ಎಲ್ಎಸಿ 2004 ಬೆಂಗಳೂರು ದಿನಾಂಕ: 6ನೇ ಅಕ್ಟೋಬರ್ 2004**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಗದಗ ಜಿಲ್ಲೆ ರೋಣದ ಸಿವಿಲ್ ನ್ಯಾಯಾಧೀಶರ (ಹಿರಿಯ ವಿಭಾಗ) ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 21.10.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 1150 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ, (ಆಡಳಿತ-1).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ :** 2004-05ನೇ ಸಾಲಿನಲ್ಲಿ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಹೊಸ ಯೋಜನೆಗಳ ಮಂಜೂರಾತಿ ಕುರಿತು.

**ಓದಲಾಗಿದೆ :** 1. ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರ ಪತ್ರ ಕ್ರಮಾಂಕ ಆಪ್ರಾಸಂಪ: ಯೋಜನೆ: 2004-05 ದಿನಾಂಕ: 28.7.2004.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 28.7.2004ರ ಪರಂಪರಾ ಆಯುಕ್ತರ ಪತ್ರದಲ್ಲಿ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯು 2004-05ನೇ ಸಾಲಿನಲ್ಲಿ ಹಮ್ಮಿಕ್ಕೊಂಡಿರುವ ಈ ಕೆಳಕಂಡ ಹೊಸ ಯೋಜನೆಗಳಿಗೆ ಮಂಜೂರಾತಿ ಆದೇಶವನ್ನು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

1) ಪರಂಪರೆ ಕಟ್ಟಡಗಳ ಸ್ವಚ್ಛತೆ ಹಾಗೂ ರಕ್ಷಣೆಯ ಪ್ರಚಾರಣೆ
2) ಆಯ್ಕೆಗೊಂಡಿರುವ ಪಾರಂಪರಿಕ ಕಟ್ಟಡಗಳ ರಕ್ಷಣೆ ಹಾಗೂ ಸಂರಕ್ಷಣೆ
3) ಆಡಳಿತಾತ್ಮಕ ವೆಚ್ಚ, ತರಬೇತಿ ಹಾಗೂ ಪಾರಂಪರಿಕ ಕಟ್ಟಡ ಗುರುತಿಸಲು

ಹಾಗೂ ಈ ಯೋಜನೆಗಳನ್ನು ಪ್ರಸಕ್ತ ಸಾಲಿನ ಅನುದಾನದಲ್ಲಿ ಒದಗಿಸಲಾಗಿರುವ ಆಯವ್ಯಯದ ಮಿತಿಗೆ ಅನುಗುಣವಾಗಿ ವ್ಯಯ ಮಾಡಲು ಪ್ರಸ್ತಾಪಿಸಿರುತ್ತಾರೆ.

ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಹೊಸ ಇಲಾಖೆಯ ಹೊಸ ಯೋಜನೆಗಳಿಗೆ ಮಂಜೂರಾತಿಯನ್ನು ನೀಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 161 ಕೆಎಂಯು 2004 ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2004-05ನೇ ಸಾಲಿನಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಹೊಸ ಯೋಜನೆಗಳ ಮಂಜೂರಾತಿ ಕುರಿತು ಈ ಕೆಳಕಂಡ ಮೂರು ಹೊಸ ಯೋಜನೆಗಳನ್ನು ಅನುಷ್ಠಾನಗೊಳಿಸಲು ಒಟ್ಟಾರೆ ಪಾರಂಪರಿಕ ಕಾರ್ಯಚಟುವಟಿಕೆಗಳಿಗೆ ಹೊಸ ಯೋಜನೆಯಾಗಿ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಹೊಸ ಇಲಾಖೆಗೆ ಅನುಮೋದನೆ ನೀಡಲಾಗಿದೆ.

1) ಪರಂಪರೆ ಕಟ್ಟಡಗಳ ಸ್ವಚ್ಛತೆ ಹಾಗೂ ರಕ್ಷಣೆಯ ಪ್ರಚಾರಣೆ
2) ಆಯ್ಕೆಗೊಂಡಿರುವ ಪಾರಂಪರಿಕ ಕಟ್ಟಡಗಳ ರಕ್ಷಣೆ ಹಾಗೂ ಸಂರಕ್ಷಣೆ
3) ಆಡಳಿತಾತ್ಮಕ ವೆಚ್ಚ, ತರಬೇತಿ ಹಾಗೂ ಪಾರಂಪರಿಕ ಕಟ್ಟಡ ಗುರುತಿಸಲು

ಪ್ರಸಕ್ತ ಆರ್ಥಿಕ ಸಾಲಿನ ಆಯವ್ಯಯದಲ್ಲಿ ಕಲ್ಪಿಸಲಾದ ಅನುದಾನದ ಮೊತ್ತಕ್ಕೆ ಅನುಗುಣವಾಗಿ ಈ ಕಾರ್ಯಚಟುವಟಿಕೆಗಳನ್ನು ಅನುಷ್ಠಾನಗೊಳಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1523 ವೆಚ್ಚ-5:2004 ದಿನಾಂಕ: 5.10.2004ರಲ್ಲಿ ನೀಡಿದ ಅನುಮೋದನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1151 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 77 ಮುನೋಸೊ 99, ದಿನಾಂಕ: 10.4.2000.
2. ಸರ್ಕಾರಿ ಆದೇಶ ಸಂಖ್ಯೆ: ಕಂಇ 77 ಮುನೋಸೊ 99, ದಿನಾಂಕ: 12.11.2003.
3. ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಆಡಳಿತಾಧಿಕಾರಿಗಳು, ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ ಇವರ ಪತ್ರ ಸಂಖ್ಯೆ: ಸಿ.7: ವಿಗಸಂ:16:2004-05; 272 ದಿನಾಂಕ: 23.6.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ, ಈ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಲು ಹಾಗೂ ಚುನಾವಣೆಯನ್ನು ನಡೆಸಲು ಸಂಘಕ್ಕೆ ಕ್ಷೇತ್ರ ಶಿಕ್ಷಣಾಧಿಕಾರಿ, ಅರಕಲಗೂಡು, ಹಾಸನ ಜಿಲ್ಲೆ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸದರಿಯವರು ನಿಗದಿತ ಅವಧಿಯೊಳಗೆ ಸಂಸ್ಥೆಗೆ ಚುನಾವಣೆ ನಡೆಸಲು ಸಾಧ್ಯವಾಗದೇ ಇದ್ದುದರಿಂದ ಆಡಳಿತಾಧಿಕಾರಿ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸುತ್ತಾ ಬರಲಾಗಿದ್ದು, ಮೇಲೆ ಓದಲಾದ (2)ರ ಆದೇಶದಲ್ಲಿ ವಿಸ್ತರಿಸಲಾದ ಆಡಳಿತಾಧಿಕಾರಿಯ ಅವಧಿಯು ದಿನಾಂಕ: 9.4.2004ಕ್ಕೆ ಮುಕ್ತಾಯವಾಗಿರುತ್ತದೆ.

ಮೇಲೆ ಓದಲಾದ (3)ರಲ್ಲಿ ಸಂಸ್ಥೆಯ ಆಡಳಿತಾಧಿಕಾರಿ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಯವರು, ಶಿಕ್ಷಣ ಇಲಾಖೆಯಲ್ಲಿ ಅನೇಕ ಹೊಸ ಕಾರ್ಯಕ್ರಮಗಳು ಜಾರಿಗೆ ಬಂದಿದ್ದು, ಕೆಲಸದ ಒತ್ತಡವಿರುವುದರಿಂದ ಈ ಮೇಲ್ಕಂಡ ಸಂಸ್ಥೆಯ ಆಡಳಿತಾಧಿಕಾರಿಯಾಗಿ ಕೆಲಸ ನಿರ್ವಹಿಸಲು ತೊಂದರೆ ಆಗುತ್ತಿರುವ ಕಾರಣ ಈ ಸಂಸ್ಥೆಗೆ ಬೇರೆ ಅಧಿಕಾರಿಯನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡುವಂತೆ ಕೋರಿರುತ್ತಾರೆ. ಸದರಿಯವರ ಕೋರಿಕೆಯನ್ನು ಕೂಲಕಂಷವಾಗಿ ಪರಿಶೀಲಿಸಿದ್ದು, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಅರಕಲಗೂಡು, ಹಾಸನ ಜಿಲ್ಲೆ ಇವರ ಬದಲಾಗಿ, ಉಪ ವಿಭಾಗಾಧಿಕಾರಿಗಳು, ಹಾಸನ ಉಪ ವಿಭಾಗ, ಹಾಸನ ಇವರನ್ನು ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ಅರಕಲಗೂಡು ತಾಲ್ಲೂಕು ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 49 ಮುನೋಸೊ 2004, ಬೆಂಗಳೂರು ದಿನಾಂಕ: 5ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27ಎ ಪ್ರಕಾರ ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ (ರಿ), ಕೇರಳಾಪುರ. ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ, ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದ್ದ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಅರಕಲಗೂಡು ತಾಲ್ಲೂಕು, ಇವರ ಬದಲಾಗಿ ಉಪ ವಿಭಾಗಾಧಿಕಾರಿಗಳು, ಹಾಸನ ಉಪ ವಿಭಾಗ, ಹಾಸನ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ ಮತ್ತು ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 10.4.2004 ರಿಂದ 9.10.2004 ಮತ್ತು 10.10.2004 ರಿಂದ 9.1.2005 ರವರೆವಿಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ದಿನಾಂಕ: 9.1.2005ರೊಳಗಾಗಿ ಕಡ್ಡಾಯವಾಗಿ ಚುನಾವಣೆ ನಡೆಸಿ, ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಜಿ. ನಾರಾಯಣ**

ಪಿ.ಆರ್. 1152 ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

**EDUCATION SECRETARIAT**

**CORRIGENDUM No. ED 195 YOSAKA 2002 Bangalore dated: 12th October 2004**

In G.O. No. 195 YOSAKA 2002 dated: 19.8.2004 the entries appearing in Annexure shall be read as follows with effect from 19.8.2004.

(a) Sl. No. 30 Shri Guru Mudukeshvara Vidyapeetha, Molakalmuru-Salary; of 08 Resources Teachers-Rs.2,56,604.00 (Rupees two lakh fifty six thousand six hundred and four only).

(b) Sl. No. 32 Shri Mathe Kalikadevi Mahila Vidya Samsthe, channagiriSalary of 12 Resources Teachers-Rs.3,77,073.00 (Rupees three lakh Seventy Seven thousand Seventy three only)

(c) Sl. No. 33 Shri Sharanabasaveshwara Education Society, Channagiri-salary of 06 Resources Teachers-Rs.1,78,110.00 (Rupees One lakh seventy eight thousand one hundred and ten only).

(d) Sl.No. 40- Sri Jagadguru Gurusiddeshwara Vidyavardaka and Samskruthika Samshte, Guledagudda-Salary of 16 Resource Teachers Rs.6,17,970.00 (Rupees Six lakh Seventeen thousand nine hundred and seventy only).

By Order and in the Name of the Governor of Karnataka,

**K. SRIKANTESHWARA**

Special Officer & Ex-Officio,

PR-1143 Deputy Secretary to Government (Planning), Education Department.

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಗಜಾನನ, ನಿವೃತ್ತ ಸಹನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇ ಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ, ಹಾಗೂ ಶ್ರೀ ಡಿ.ಎಂ. ಭಜಂತ್ರಿ, ಪ್ರಾಂಶುಪಾಲರು, ಡಯಟ್, ಏರಮರಸ್, ರಾಯಚೂರು ಇ ವರುಗಳ ಮೇಲಿನ ಜಂಟಿ ಇ ಲಾಖಾ ವಿಚಾರಣೆ-ಅಂತಿಮ ಆದೇಶ.

**ಓದಲಾಗಿದೆ:**
1. ದಿ:21.5.2002 ರ ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಇ ಡಿ 71 ಡಿಜಿಡಿ 2002
2. ಆಪಾದಿತ ಸರ್ಕಾರಿ ನೌಕರರ ಶ್ರೀ ಗಜಾನನ ಇ ವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ:27.5.2002, ಶ್ರೀ ಭಜಂತ್ರಿ ಇ ವರ ಪ್ರತಿರಕ್ಷಣಾ ಹೇಳಿಕೆ ದಿ:2.9.2002
3. ಸರ್ಕಾರಿ ಆದೇಶ ಸಂ:ಇ ಡಿ 71 ಡಿಜಿಡಿ 2002,ದಿ:11.3.2003
4. ನಿರ್ದೇಶಕರು, (ಪ್ರೌಢಶಿಕ್ಷಣ) ಸಾರ್ವಜನಿಕ ಶಿಕ್ಷಣ ಇ ಲಾಖೆ, ಬೆಂಗಳೂರು, ಹಾಗೂ ವಿಚಾರಣಾಧಿಕಾರಿ, ಇ ವರ ವಿಚಾರಣಾ ವರದಿ ಸಂ:ನಿ(ಪ್ರೌಶಿ)ವಿಚಾರಣೆ ವರದಿ(ಗು.ರಾ)1:2003-04,ದಿ:22.9.2003
5. ಎರಡನೇ ಕಾರಣ ಕೇಳುವ ನೋಟೀಸ್ ಸಂ:ಇ ಡಿ 71 ಡಿಜಿಡಿ 2002 ದಿನಾಂಕ:10.2.2004
6. ಆಪಾದಿತ ಸರ್ಕಾರಿ ನೌಕರರ ಶ್ರೀ ಗಜಾನನ ಇ ವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ:1.3.2004, ಶ್ರೀ ಭಜಂತ್ರಿ ಇ ವರ ಪ್ರತಿರಕ್ಷಣಾ ಹೇಳಿಕೆ ದಿ:1.3.2003

**ಪ್ರಸ್ತಾವನೆ:**

ಶ್ರೀ ಅಂಬಣ್ಣ, ದೈಹಿಕ ಶಿಕ್ಷಣ ಶಿಕ್ಷಕರು, ಸರ್ಕಾರಿ ಶಿಕ್ಷಕರ ತರಬೇತಿ ಕೇಂದ್ರ, ಸಿಂದನೂರು, ರಾಯಚೂರು ಜಿಲ್ಲೆ, ಇ ವರಿಗೆ ವೇತನ ನಿಗದಿಪಡಿಸುವ ವಿಚಾರದಲ್ಲಿ ಸದರಿಯವರು KATಯಲ್ಲಿ ಅರ್ಜಿ ಸಂಖ್ಯೆ 6805/98ನ್ನು ಸಲ್ಲಿಸಿದ್ದು ನ್ಯಾಯಾಲಯವು ದಿನಾಂಕ: 28.1.1999 ರಂದು ತೀರ್ಪುನೀಡಿ ಅರ್ಜಿದಾರರ ಮನವಿಯನ್ನು ಪರಿಶೀಲಿಸಲು ಹಾಗೂ ಈ ಹಿಂದೆ ಶ್ರೀ ಸಚ್ಚಿದಾನಂದ ಮೂರ್ತಿಯವರ ಪ್ರಕರಣದಲ್ಲಿ, KATಯು ದೈಹಿಕ ಶಿಕ್ಷಣ ಶಿಕ್ಷಕರಿಗೆ ಅನುಪಾತ ಇ ತ್ಯರ್ಥಪಡಿಸಿ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ ಇ ಡಿ 392 ಎಸ್ ಇ ಡಬ್ಲ್ಯೂ 98 ದಿನಾಂಕ 15-1-1999ರನ್ವಯ ಶ್ರೀ ಅಂಬಣ್ಣ ಇ ವರು ಅರ್ಹರಾಗುವುದಿದ್ದಲ್ಲಿ ವೇತನ ಸೌಲಭ್ಯವನ್ನು ನೀಡುವಂತೆಯೂ, ಹಾಗೂ, ಹೀಗೆ ನೀಡುವಾಗ 1995ಕ್ಕಿಂತ ಹಿಂದಿನ ಅವಧಿಗೆ ಯಾವುದೇ ಆರ್ಥಿಕ ಸೌಲಭ್ಯವನ್ನು ನೀಡದೆ ಕಾಲ್ಪನಿಕವಾಗಿ ವೇತನ ನಿಗಧಿಪಡಿಸುವಂತೆಯೂ ಗುಲ್ಬರ್ಗಾ ವಿಭಾಗದ ಸಹನಿರ್ದೇಶಕರಿಗೆ ಆದೇಶ ನೀಡಿದ್ದರೂ ಸಹ ಈ ತೀರ್ಪಿನಲ್ಲಿ ದೈಹಿಕ ಶಿಕ್ಷಣ ಶಿಕ್ಷಕರಿಗೆ ವೇತನ ನಿಗಧಿಪಡಿಸುವ ಬಗ್ಗೆ ಮಾನ್ಯ ಉಚ್ಛ ನ್ಯಾಯಾಲಯವು ದಾವೆ ಸಂಖ್ಯೆ 18231/94ರಲ್ಲಿ ಮಾಡಿರುವ ಆದೇಶ ಮತ್ತು ಶ್ರೀ ಸಚ್ಚಿದಾನಂದ ಮೂರ್ತಿಯವರ ಪ್ರಕರಣವನ್ನು ನ್ಯಾಯಾಲಯವು ಪ್ರಸ್ತಾಪಿಸಿ, ಈ ಆದೇಶಗಳ ಆಧಾರದ ಮೇರೆಗೆ ಸರ್ಕಾರವು ತಮ್ಮ ಅಧಿಕೃತ ಜ್ಞಾಪನಾ ಸಂಖ್ಯೆ ಇ ಡಿ 392 ಎಸ್ಇ ಡಬ್ಲ್ಯೂ 98 ದಿ:15-1-1999ರಂತೆ, ಕೆಲವು ಕ್ರಮ ಮತ್ತು ಷರತ್ತುಗಳೊಡನೆ ದೈಹಿಕ ಶಿಕ್ಷಣ ಶಿಕ್ಷಕರಿಗೆ ವೇತನ ನಿಗಧಿಸುವ ಬಗ್ಗೆ ನಿರ್ದೇಶನ ನೀಡಿ ಆದೇಶಿಸಿತ್ತು. ಆದರೆ ದಿನಾಂಕ:15-1-1999ರ ಸರ್ಕಾರಿ ಆದೇಶದಲ್ಲಿನ ಷರತ್ತು ಹಾಗೂ KATಯು ದಿ:28-1-1999ರಂದು ನೀಡಿರುವ ತೀರ್ಪು ಅನ್ವಯ ಶ್ರೀ ಅಂಬಣ್ಣರವರ ಪ್ರಕರಣವನ್ನು ಪರಿಶೀಲಿಸಿ, ವೇತನ ನಿಗಧಿಗೊಳಿಸಬಹುದಾದ ಬಗ್ಗೆ ಅಗತ್ಯ ಕ್ರಮಕೈಗೊಳ್ಳಲು ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ ಗುಲ್ಬರ್ಗಾ ಇ ವರಿಗೆ ನಿರ್ದೇಶನ ನೀಡಿದ್ದರೂ ಸಹ ನ್ಯಾಯಾಲಯ ತೀರ್ಪಿನ ಅನ್ವಯ ಸಕಾಲದಲ್ಲಿ ಯಾವುದೇ ಕ್ರಮ ಜರುಗಿಸದೆ, ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿದ್ದು, ಇ ದರಿಂದಾಗಿ ಸಹನಿರ್ದೇಶಕರು, ಹಾಗೂ ಕಛೇರಿಯ ಅಧಿಕಾರಿಗಳು ಕರ್ತವ್ಯಚ್ಯುತಿ ಎಸಗುವ ಮೂಲಕ KATಯಲ್ಲಿ ಶ್ರೀ ಅಂಬಣ್ಣ ಇ ವರು ಅರ್ಜಿ ಸಂಖ್ಯೆ 6805/99ಕ್ಕೆ ಎಕ್ಸಿಕ್ಯೂಷನ್ ಸಂಖ್ಯೆ 2/2000ನ್ನು ನ್ಯಾಯಾಲಯದಲ್ಲಿ ದಾಖಲಿಸಲು ನೇರಕಾರಣರಾಗಿ ಕಾರ್ಯನಿರ್ವಹಣೆಯಲ್ಲಿ ಕರ್ತವ್ಯಚ್ಯುತಿ, ಬೇಜವಾಬ್ದಾರಿತನ, ಕರ್ತವ್ಯ ನಿರ್ಲಕ್ಷತೆಯಂತಹ ದುರ್ನಡತೆ ಎಸಗಲು ಶ್ರೀ D.M.ಬಜಂತ್ರಿ ಹಿಂದಿನ ಪ್ರಭಾರಿ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ ಗುಲ್ಬರ್ಗ, ಹಾಗೂ ಶ್ರೀ ಗಜಾನನ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಗುಲ್ಬರ್ಗ, ಇ ವರುಗಳು ನೇರ ಕಾರಣರಾಗಿದ್ದ ಆರೋಪಗಳ ಮೇರೆಗೆ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸಿ, ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕದಂದು ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು. ಆಪಾದಿತರು ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕಗಳಲ್ಲಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ ಅವರುಗಳ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದರಿಂದ ಮೇಲೆ ಓದಲಾದ ಕ್ರಮಾಂಕ (3) ರಲ್ಲಿನ ಸರ್ಕಾರಿ ಆದೇಶದ ಮೂಲಕ ವಿಚಾರಣೆ ನಡೆಸಲು ನಿರ್ದೇಶಕರು, ಪ್ರೌಢಶಿಕ್ಷಣ, ಸಾರ್ವಜನಿಕ ಶಿಕ್ಷಣ ಇ ಲಾಖೆ, ಬೆಂಗಳೂರು, ಇ ವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ, ಇ ವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು.

ವಿಚಾರಣಾಧಿಕಾರಿಗಳು ದಿನಾಂಕ:22.9.2003 ರಂದು ವಿಚಾರಣಾ ವರದಿ ಸಲ್ಲಿಸಿ, ಪತ್ರ ವ್ಯವಹಾರದಲ್ಲಿ ನ್ಯಾಯಾಲಯದ ಆದೇಶವನ್ನು ಅನುಷ್ಠಾನಗೊಳಿಸಲು ವಿಳಂಬವಾಗಿದೆಯೇ ಹೊರತು ಇ ದರಲ್ಲಿ ಯಾವುದೇ ದುರುದ್ದೇಶ ಇ ರಲಿಲ್ಲವೆಂದು ಹಾಗೂ ಇ ದರಲ್ಲಿ ಯಾವುದೇ ಆರ್ಥಿಕ ನಷ್ಟ ಆಗಿಲ್ಲದಿರುವುದರಿಂದ ಆಪಾದಿತರಾದ ಇ ಬ್ಬರನ್ನು ಪ್ರಕರಣದಿಂದ ಕೈಬಿಡಬಹುದೆಂದು ಶಿಫಾರಸ್ಸು

ಮಾಡಿದ್ದರು. ವಿಚಾರಣಾ ವರದಿಯಲ್ಲಿ ನಿರ್ಣಯ ಹಾಗೂ ದಾಖಲೆಗಳನ್ನು ಪರಿಶೀಲಿಸಿದ ನಂತರ ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ತಳ್ಳಿಹಾಕಿ ಆಪಾದನೆ ಸಾಬೀತಾಗಿದೆ ಎಂದು ನಿರ್ಣಯ ಕೈಗೊಳ್ಳಬಾರದೇಕೆ ಎಂದು ಮೇಲೆ ಓದಲಾದ ಕ್ರಮಾಂಕ (5) ರಲ್ಲಿ ವಿಚಾರಣಾ ವರದಿಯನ್ನು 2ನೇ ಕಾರಣ ಕೇಳುವ ನೋಟೀಸ್ ಮೂಲಕ ಜಾರಿಗೊಳಿಸಲಾಗಿತ್ತು. ಆಪಾದಿತರುಗಳು ಮೇಲೆ ಓದಲಾದ ಕ್ರಮಾಂಕ (6) ರಲ್ಲಿನ ಪತ್ರದ ಮೂಲಕ ಪ್ರತಿರಕ್ಷಣಾ ಹೇಳಿಕೆಯೊಂದಿಗೆ ದಾಖಲೆಗಳನ್ನು ಒದಗಿಸಿ, ಆರೋಪಗಳನ್ನು ಅಲ್ಲಗಳೆದಿದ್ದರು.

ಶ್ರೀ ಗಜಾನನ ಹಾಗೂ ಶ್ರೀ ಡಿ.ಎಂ.ಬಜಂತ್ರಿ ಇ ವರುಗಳು ಸಲ್ಲಿಸಿದ ಪ್ರತಿರಕ್ಷಣಾ ಹೇಳಿಕೆ ಹಾಗೂ ದಾಖಲೆಗಳನ್ನು ಪರಿಶೀಲಿಸಿದ ನಂತರ ಆಪಾದಿತ ಇ ಬ್ಬರು ನ್ಯಾಯಾಲಯದ ಆದೇಶವನ್ನು ಅನುಷ್ಠಾನದಿಂದ ಉದ್ಭವವಾಗುವ ಸಾಧಕ-ಬಾಧಕಗಳಿಗೆ ಹಾಗೂ ಸ್ಪಷ್ಟೀಕರಣ ಬಗ್ಗೆ ಪ್ರೌಢಶಿಕ್ಷಣ ನಿರ್ದೇಶಕರೊಂದಿಗೆ ಪತ್ರ ವ್ಯವಹರಿಸುವುದು ಅನಿವಾರ್ಯವಾಗಿರುವುದು ಕಂಡುಬಂದಿದೆ. ಹಾಗೂ ಶ್ರೀ ಅಂಬಣ್ಣ ಇ ವರಿಗೆ ವೇತನ ನಿಗದಿಪಡಿಸಲು ಅರ್ಹರಾಗಿಲ್ಲದಿರುವುದರಿಂದ, ಆರ್ಥಿಕ ಪ್ರಯೋಜನ ನೀಡಿಲ್ಲದಿರುವುದು ಕಂಡುಬಂದಿರುವುದರಿಂದ ಆಪಾದಿತರಿಬ್ಬರನ್ನು ದೋಷಮುಕ್ತರನ್ನಾಗಿಸುವುದು ಸೂಕ್ತವೆಂದು ಕಂಡುಬಂದಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇ ಡಿ 71 ಡಿಜಿಡಿ 2002, ಬೆಂಗಳೂರು ದಿನಾಂಕ: 1ನೇ ಅಕ್ಟೋಬರ್ 2004**

ಶ್ರೀ ಗಜಾನನ, ನಿವೃತ್ತ ಸಹನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇ ಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ, ಹಾಗೂ ಶ್ರೀ ಡಿ.ಎಂ. ಭಜಂತ್ರಿ, ಪ್ರಾಂಶುಪಾಲರು, ಡಯಟ್, ಎರಮರಸ್, ರಾಯಚೂರು ಅವರುಗಳನ್ನು ದಿನಾಂಕ:21.5.2002 ರ ನೋಟೀಸಿನಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತರನ್ನಾಗಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1123 **ಎಫ್.ಆರ್.ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ.(ಸೇ-1,2)

**ವಿಷಯ:** ಶ್ರೀ ಹೆಚ್.ಜಯಪ್ಪ, ನಿವೃತ್ತ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಮತ್ತು ಇನ್ನಿತರೆ 6 ಅಧಿಕಾರಿ: ನೌಕರರ ಮೇಲಿನ ಆರೋಪಗಳಿಗೆ ಜಂಟಿ ಇಲಾಖಾ ವಿಚಾರಣೆ ನಡೆಸಲು ನೇಮಕಗೊಂಡ ಮಂಡನಾಧಿಕಾರಿಯವರನ್ನು ಬದಲಾಯಿಸುವ ಬಗ್ಗೆ – ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ:ಇಡಿ 53 ಡಿಜಿಡಿ 2004 ದಿ:20.7.2004
2. ಶ್ರೀ ಚಿದ್ರೆ ಶಂಕರಯ್ಯ ಸ್ವಾಮಿ, ವಿಭಾಗೀಯ ಕಾರ್ಯದರ್ಶಿ, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ, ಹಾಗೂ ವಿಚಾರಣಾಧಿಕಾರಿ ಇವರ ಅರೆ ಸರ್ಕಾರಿ ಪತ್ರ ಸಂ:ಆಪ್ತ–ಶಾಖೆ:ಡಿಡಿಪಿಐ:ರಾಯಚೂರು:ದೂರು:2004–05 ದಿನಾಂಕ: 2.8.2004

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ರ ದಿನಾಂಕ:20.7.2004 ರ ಸರ್ಕಾರಿ ಆದೇಶದ ಮೂಲಕ ಶ್ರೀ ಹೆಚ್.ಜಯಪ್ಪ, ನಿವೃತ್ತ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಹಾಗೂ 6 ಅಧಿಕಾರಿ ನೌಕರರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ಶ್ರೀ ಚಿದ್ರೆ ಶಂಕರಯ್ಯ ಸ್ವಾಮಿ, ವಿಭಾಗೀಯ ಕಾರ್ಯದರ್ಶಿ, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ, ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಅದೇ ನಿಯಮಾವಳಿಗಳ ನಿಯಮ 11(5)(ಸಿ) ಮೇರೆಗೆ ಶಿಕ್ಷಣಾಧಿಕಾರಿ, ವಿಭಾಗೀಯ ಕಾರ್ಯದರ್ಶಿ, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ, ಇವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ಆದರೆ ಮೇಲೆ ಓದಲಾದ ಕ್ರಮಾಂಕ (2) ರ ದಿನಾಂಕ:2.8.2004 ರ ಪತ್ರದ ಮೂಲಕ ಗುಲ್ಬರ್ಗಾ ವಿಭಾಗದ ಸಹನಿರ್ದೇಶಕರ ಕಚೇರಿಯಲ್ಲಿ ಶಿಕ್ಷಣಾಧಿಕಾರಿ ಹುದ್ದೆಯು ಖಾಲಿ ಇರುವುದರಿಂದ ಬೇರೊಬ್ಬ ಅಧಿಕಾರಿಯವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡುವಂತೆ ಕೋರಿದ್ದಾರೆ.

ಆದ್ದರಿಂದ ನೇಮಕಗೊಂಡ ಮಂಡನಾಧಿಕಾರಿಯವರನ್ನು ಬದಲಾಯಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 53 ಡಿಜಿಡಿ 2004 ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಕೆಳಕಂಡ ಅಧಿಕಾರಿ:ನೌಕರರ ಮೇಲಿನ ಆರೋಪಗಳಿಗೆ ಜಂಟಿ ಇಲಾಖಾ ವಿಚಾರಣೆ ನಡೆಸಲು ದಿನಾಂಕ:20.7.2004 ರ ಸರ್ಕಾರಿ ಆದೇಶದ ಮೂಲಕ ನೇಮಕಗೊಂಡ ಮಂಡನಾಧಿಕಾರಿಯವರನ್ನು ಬದಲಾಯಿಸಿ, ಕ್ಷೇತ್ರ ಶಿಕ್ಷಣಾಧಿಕಾರಿ, ಗುಲ್ಬರ್ಗಾ ದಕ್ಷಿಣ ತಾಲ್ಲೂಕು, ಗುಲ್ಬರ್ಗಾ, ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಿ ಆದೇಶಿಸಿದೆ. ಈಗಾಗಲೇ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಶ್ರೀ ಚಿದ್ರೆ ಶಂಕರಯ್ಯ ಸ್ವಾಮಿ, ವಿಭಾಗೀಯ ಕಾರ್ಯದರ್ಶಿ, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ, ಇವರು ವಿಚಾರಣಾಧಿಕಾರಿಯಾಗಿಯೇ ಮುಂದುವರೆಯುತ್ತಾರೆ.

**ಅಧಿಕಾರಿ ನೌಕರರ ಹೆಸರು:**

1. ಶ್ರೀ ಹೆಚ್.ಜಯಪ್ಪ, ನಿವೃತ್ತ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ,
2. ಶ್ರೀ ಡಿ.ಜಿ.ಕರ್ಕಿಹಳ್ಳಿ, ವಿಜ್ಞಾನ ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು,
3. ಶ್ರೀ ವಿ.ಟಿ.ಚಿಲಕದ, ಕನ್ನಡ ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು,

4. ಶ್ರೀ ಎಂ.ಎಂ.ದೊಡ್ಡಮನಿ, ಆಂಗ್ಲ ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು,
5. ಶ್ರೀ ಕೃಷ್ಣಪ್ಪ, ಗಣಿತ ವಿಷಯ ಪರಿವೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು,
6. ಶ್ರೀ ಎಂ.ಅಯ್ಯಪ್ಪ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ನೀರಮಾನ್ವಿ, ಮಾನ್ವಿ ತಾಲ್ಲೂಕ್, ರಾಯಚೂರು ಜಿಲ್ಲೆ,
7. ಶ್ರೀ ಮಹಂತೇಶ, ಸಹಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ರಾಜಲಬಂಡ, ಮಾನ್ವಿ ತಾಲ್ಲೂಕ್, ರಾಯಚೂರು ಜಿಲ್ಲೆ,

ವಿಚಾರಣಾಧಿಕಾರಿಗಳು ಪ್ರತಿಯೊಬ್ಬ ಆರೋಪಿತ ನೌಕರರ ಮೇಲಿನ ಆರೋಪಗಳಿಗೆ ಸಿಸಿಎ ನಿಯಮಗಳನ್ವಯ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು 2 ತಿಂಗಳೊಳಗಾಗಿ ತಪ್ಪದೆ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1110 **ಎಫ್.ಆರ್.ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.(ಸೇ–1,2)

**ವಿಷಯ:** ಶ್ರೀ ರಾಮಚಂದ್ರ, ಕ್ಷೇತ್ರ ಸಂಪನ್ಮೂಲ ಕೇಂದ್ರದ ಸಮನ್ವಯಾಧಿಕಾರಿ, ದೇವದುರ್ಗ ತಾ. ರಾಯಚೂರು ಜಿಲ್ಲೆ, ಹಿಂದಿನ ಬಿಇ ಒ ದೇವದುರ್ಗ ತಾ. ಇ ವರು ದೇವದುರ್ಗ ಪಟ್ಟಣ ಪಂಚಾಯಿತಿಯ ಚುನಾವಣಾಧಿಕಾರಿಯಾಗಿ ಕರ್ತವ್ಯಚ್ಯುತಿ ಎಸಗಿದ ಆರೋಪಗಳಿಗೆ ಶಿಸ್ತು ಕ್ರಮ- ಅಂತಿಮ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ:ಇ ಡಿ 7 ಡಿಜಿಡಿ 2002 ದಿ:25.2.2002 ಮತ್ತು ಅಧಿಸೂಚನೆ ದಿ:3.7.2002
2. ಸೂಚನಾ ಪತ್ರ ಸಂಖ್ಯೆ:ಇ ಡಿ 7 ಡಿಜಿಡಿ 2002, ದಿ:25.2.2002
3. ಶ್ರೀ ರಾಮಚಂದ್ರ, ಇ ವರ ಪತ್ರರಕ್ಷಣಾ ಹೇಳಿಕೆ ದಿ:8.3.2002
4. ಸರ್ಕಾರಿ ಆದೇಶ ಸಂಖ್ಯೆ:ಇ ಡಿ 7 ಡಿಜಿಡಿ 2002 ದಿ:25.2.2002
5. ಶ್ರೀ ಕೆ.ಡಿ.ಬಿರ್ಜೆ, ಉಪಕಾರ್ಯದರ್ಶಿ, ಅಭಿವೃದ್ಧಿಜಿಲ್ಲಾಪಂಚಾಯತ್, ಉ.ಕಾ. ಜಿಲ್ಲೆ, ಕಾರವಾರ, ಹಾಗೂ ವಿಚಾರಣಾಧಿಕಾರಿ, ಇ ವರ ವಿಚಾರಣಾ ವರದಿ ಸಂ:ಸಿಬ್ಬಂದಿ:ಇ ವಿ:1:2002-03, ದಿ:26.3.2003
6. 2ನೇ ಕಾರಣ ಕೇಳುವ ನೋಟೀಸ್ ಸಂ:ಇ ಡಿ 7 ಡಿಜಿಡಿ 2002 ದಿ:21.4.2003
7. ಶ್ರೀ ರಾಮಚಂದ್ರ, ಇ ವರು ವಿಚಾರಣಾ ವರದಿಗೆ ನೀಡಿರುವ ಪ್ರತಿ ರಕ್ಷಣಾ ಹೇಳಿಕೆ ದಿ:23.5.2003

**ಪ್ರಸ್ತಾವನೆ:**

ಶ್ರೀ ರಾಮಚಂದ್ರ, ಸಮನ್ವಯಾಧಿಕಾರಿ, ಕ್ಷೇತ್ರ ಸಂಪನ್ಮೂಲ ಕೇಂದ್ರ, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ, ಇ ವರು ಈ ಹಿಂದೆ ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿ, ದೇವದುರ್ಗ ತಾಲ್ಲೂಕ್, ಇ ಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ದೇವದುರ್ಗ ಪಟ್ಟಣ ಪಂಚಾಯಿತಿಯ ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಿದ್ದು ವಾರ್ಡ್ ನಂ.4 ಕ್ಕೆ ಸಂಬಂಧಿಸಿದಂತೆ ಶ್ರೀಮತಿ ಉಮಾದೇವಿ ಕೋಂ ಶಿವು ಎಂಬುವವರು ನಾಮಪತ್ರ ಸಲ್ಲಿಸಿದ್ದರು. ಇ ವರಿಗೆ ಸೂಚಕರಾಗಿದ್ದ ಶ್ರೀಮತಿ ಸಿದ್ಧಮ್ಮ ಎಂಬುವವರು ಸಲ್ಲಿಸಿದ್ದರೆನ್ನಲಾದ ನಾಮಪತ್ರ ಹಿಂದಕ್ಕೆ ಪಡೆಯುವ ನೋಟೀಸಿಗೆ ಶ್ರೀಮತಿ ಉಮಾದೇವಿ ಎಂಬುವವರು ಹೆಬ್ಬೆಟ್ಟಿನ ಗುರುತು ಮಾಡಿಲ್ಲವೆಂದು, ಆದಾಗ್ಯೂ ಸಹ ಚುನಾವಣಾಧಿಕಾರಿಗಳು ಶಾಮೀಲಾಗಿ ಖೋಟಾ ಪತ್ರವನ್ನು ಒಪ್ಪಿದ್ದಾರೆಂದು ಆರೋಪಿಸಿ ಶ್ರೀಮತಿ ಉಮಾದೇವಿ ಇ ವರು ಕರ್ನಾಟಕ ಉಚ್ಛ ನ್ಯಾಯಾಲಯದಲ್ಲಿ ಸಲ್ಲಿಸಲಾದ ರಿಟ್ ಅರ್ಜಿ ಸಂಖ್ಯೆ:25138:2001 ರ ಮೇಲೆ ನ್ಯಾಯಾಲಯವು ದಿನಾಂಕ:6.3.2002 ರಂದು ತೀರ್ಪು ನೀಡಿ ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆಯನ್ನು ನಡೆಸಿ ಅಂತಿಮ ನಿರ್ಣಯ ಕೈಗೊಳ್ಳುವಂತೆ ಸೂಚಿಸಿದ್ದರ ಮೇರೆಗೆ ಆಪಾದಿತರಿಗೆ ಮೇಲೆ ಓದಲಾದ ಕ್ರಮಾಂಕ (1) ರ ದಿನಾಂಕ:25.2.2002ರ ಆದೇಶ ಮೂಲಕ ಅಮಾನತ್ತಿನಲ್ಲಿಟ್ಟು, ತದನಂತರ ದಿ:3.7.2002 ರ ಅಧಿಸೂಚನೆ ಮೂಲಕ ವಿಚಾರಣೆ ಕಾಯ್ದಿರಿಸಿ ಅಮಾನತ್ತನ್ನು ತೆರವುಗೊಳಿಸಲಾಗಿತ್ತು. ಮೇಲೆ ಓದಲಾದ ಕ್ರಮಾಂಕ (2) ರ ದಿ:25.2.2002 ರಂದು ಆರೋಪಣಾ ಪಟ್ಟಿ ಜಾರಿಗೊಳಿಸಿ ಪ್ರತಿ ರಕ್ಷಣಾ ಹೇಳಿಕೆ ಪಡೆಯಲಾಗಿದೆ. ಆಪಾದಿತರು ಆಪಾದನೆಗಳನ್ನು ಅಲ್ಲಗಳೆದಿದ್ದರಿಂದ ಕೂಲಂಕಷ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮಾಂಕ (4) ರ ದಿನಾಂಕ: 16.3.2002 ರ ಆದೇಶದ ಮೂಲಕ ಶ್ರೀ ಕೆ.ಡಿ.ಬಿರ್ಜೆ, ಉಪಕಾರ್ಯದರ್ಶಿ, (ಆಡಳಿತ) ಜಿಲ್ಲಾ ಪಂಚಾಯತ್, ರಾಯಚೂರು, ಇ ವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಶ್ರೀ ಜೆ.ತಿಮ್ಮಯ್ಯ, ಕೇಂದ್ರ ಕಚೇರಿಯ ಸಹಾಯಕರು, ಜಿಲ್ಲಾಧಿಕಾರಿಗಳ ಕಚೇರಿ, ರಾಯಚೂರು, ಇ ವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ(5) ರ ದಿನಾಂಕ:27.3.2003 ರಂದು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ್ದಾರೆ. ವಿಚಾರಣಾಧಿಕಾರಿಗಳು ವಿಚಾರಣೆಯನ್ನು ನಿಯಮಾನುಸಾರ ನಡೆಸಿ ವಾದ-ವಿವಾದಗಳನ್ನು ದಾಖಲಿಸಿಕೊಂಡು ಅಂತಿಮ ನಿರ್ಣಯದಲ್ಲಿ ಚುನಾವಣಾಧಿಕಾರಿಯಾಗಿದ್ದ ಹಾಗೂ ಆರೋಪಿತ ನೌಕರರಾದ ಶ್ರೀರಾಮಚಂದ್ರ ಇ ವರು ಶ್ರೀಮತಿ ಉಮಾದೇವಿಯವರಿಗೆ ಸೂಚಕರಾದ ಶ್ರೀಮತಿ ಸಿದ್ದಮ್ಮ ಇ ವರು ಖೋಟಾ ಅಧಿಕಾರ ಪತ್ರವನ್ನು ತಯಾರಿಸಿ ಉಮೇದುವಾರಿಕೆ ಹಿಂತೆಗೆದುಕೊಳ್ಳುವ ನೋಟೀಸನ್ನು ಸಲ್ಲಿಸಿದಾಗ ಸರಿಯಾಗಿ ಪರಿಶೀಲಿಸಲಿಲ್ಲ ಎಂದು ತಿಳಿದುಬಂದಿದೆ ಎಂದು, ಆದರೆ ಶ್ರೀಮತಿ ಸಿದ್ದಮ್ಮ ಮತ್ತು ಇ ತರರೊಂದಿಗೆ ಶಾಮೀಲಾಗಿ ಶ್ರೀಮತಿ ಉಮಾದೇವಿಯವರ ನಾಮಪತ್ರವನ್ನು ಹಿಂತೆಗೆದುಕೊಂಡಿದ್ದಾರೆ ಎಂಬ ಆರೋಪ ಇ ದ್ದರೂ ಈ

ಆರೋಪದಲ್ಲಿ ಆಪಾದಿತರು ಶಾಮೀಲಾಗಿದ್ದಾರೆ ಎಂಬ ವಾದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳೂ ಲಭ್ಯವಿಲ್ಲವೆಂದು ವಿಚಾರಣಾಧಿಕಾರಿಗಳು ತಿಳಿಸಿದ್ದಾರೆ. ಚುನಾವಣಾ ಆಯೋಗದ ನೀತಿ ಸಂಹಿತೆಗಳ ಕಡೆಗೆ ಆಪಾದಿತರು ಹೆಚ್ಚಿನ ಗಮನಹರಿಸದೇ ಇ ರುವುದರಿಂದ ಚುನಾವಣಾ ನೀತಿ ಸಂಹಿತೆಯಲ್ಲಿ ತಿಳಿಸಿರುವ ನಿರ್ದೇಶನಗಳನ್ನು ಉಲ್ಲಂಘಿಸಿದ್ದರಿಂದ ಶ್ರೀರಾಮಚಂದ್ರ ಇ ವರ ಮೇಲಿನ ಆರೋಪವು ವಿಚಾರಣೆಯಲ್ಲಿ ಸಾಬೀತಾಗಿದೆ ಎಂದೂ ನಿರ್ಣಯಿಸಿದ್ದಾರೆ.

ಆಪಾದಿತರ ಮೇಲಿನ ಆರೋಪವು ವಿಚಾರಣೆಯಲ್ಲಿ ಸಾಬೀತಾಗಿದ್ದರಿಂದ ಮೇಲೆ ಓದಲಾದ ಕ್ರಮಾಂಕ (6) ರ ದಿನಾಂಕ:21.4.2003 ರಂದು ವಿಚಾರಣಾ ವರದಿಯನ್ನು 2ನೇ ಕಾರಣ ಕೇಳುವ ನೋಟೀಸ್ ಮೂಲಕ ಜಾರಿಗೊಳಿಸಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು. ಆಪಾದಿತರು ದಿನಾಂಕ:23.5.2003 ರಂದು ಪ್ರತಿರಕ್ಷಣಾ ಹೇಳಿಕೆ ಕೆಳಗಿನಂತೆ ಸಲ್ಲಿಸಿ ಅವರ ಮೇಲಿನ ಆಪಾದನೆಯನ್ನು ಅಲ್ಲಗಳೆದಿದ್ದಾರೆ:-

1. ಚುನಾವಣಾಧಿಕಾರಿಗಳು ಚುನಾವಣಾ ಮಾರ್ಗಸೂಚಿಗಳ ಪ್ರಕಾರ ಪರಿಶೀಲನೆ ಮಾಡಿ ಕ್ರಮ ತೆಗೆದುಕೊಂಡ ಬಗ್ಗೆ:

(ಅ) ನಾಮಪತ್ರ ಸಲ್ಲಿಸುವ ಸಮಯದಲ್ಲಿ ಅಭ್ಯರ್ಥಿಯು ಹೆಬ್ಬೆಟ್ಟಿನ ಗುರುತುಗಳನ್ನು ಚುನಾವಣಾಧಿಕಾರಿಗಳ ಎದುರಿನಲ್ಲಿ ಹಾಕಿಸಿಕೊಳ್ಳುವುದು ಹಾಗೂ ಸೂಚಕರ ಸಹಿಗಳನ್ನು ಕೂಡ ಚುನಾವಣಾಧಿಕಾರಿಗಳ ಎದುರಿನಲ್ಲಿ ಹಾಕಿಸಿಕೊಳ್ಳಬೇಕೆಂದು ತಾಲ್ಲೂಕು ಚುನಾವಣೆ ಅಧಿಕಾರಿಯಾಗಲಿ, ಕೈಪಿಡಿಯಲ್ಲಿ ಆಗಲೀ ತಿಳಿಸಿರುವುದಿಲ್ಲ. ಆದರೂ ಸಹಿತ ದಿನಾಂಕ: 25.6.2001 ರಂದು ನಾಮಪತ್ರ ವಾಪಸ್ಸು ತೆಗೆದುಕೊಳ್ಳಲು ಸ್ವತ: ಸೂಚಕಳಾದ ಶ್ರೀಮತಿ ಸಿದ್ದಮ್ಮ ಅವರು ಬಂದ ಪ್ರಯುಕ್ತ ಆಕೆಯ ಸಹಿಯನ್ನು ಪ್ರಪತ್ರ 5 ರಲ್ಲಿ ಪಡೆದು ಕೊಂಡಿದ್ದೇನೆ. ಪ್ರಪತ್ರ 5 ಮತ್ತು ಅಧಿಕಾರ ಪತ್ರಗಳ ಮೇಲಿನ ಹೆಬ್ಬೆಟ್ಟಿನ ಗುರುತನ್ನು ತಾಳೆ ನೋಡಲಾಗಿ ನನಗೆ ಸರಿ ಎಂದು ಕಂಡ ಕಾರಣ ಪ್ರಪತ್ರ 5 ನ್ನು ಸ್ವೀಕರಿಸಿದ್ದೇನೆಂದು ದೃಢೀಕರಿಸುತ್ತೇನೆ.

(ಆ) ಅಭ್ಯರ್ಥಿಯಾದ ಶ್ರೀಮತಿ ಉಮಾದೇವಿಯವರ ಉಮೇದುವಾರಿಕೆ ಹಿಂತೆಗೆದುಕೊಳ್ಳುವ ಸಮಯದಲ್ಲಿ ಊರಲ್ಲಿ ಇ ಲ್ಲ ಎಂಬ ಅಂಶ ಚುನಾವಣೆ ಅಧಿಕಾರಿಯ ಗಮನಕ್ಕೆ ಬಂದಿದ್ದು ಸಾಯಂಕಾಲ 5 ಗಂಟೆಯಾಗಿದ್ದ ಪ್ರಯುಕ್ತ ಚುನಾವಣೆಕಾರ್ಯದ ಪ್ರಕ್ರಿಯೆ ಮುಗಿಸಲಾಗಿತ್ತು ಎಂದು ದೃಢೀಕರಿಸುತ್ತೇನೆ. ಹೆಬ್ಬೆಟ್ಟಿನ ಗುರುತು ಕಂಡುಹಿಡಿಯಲು ನಾನು ಆ ವಿಷಯದಲ್ಲಿ ಪರಿಣಿತನಲ್ಲ. ದೇವದುರ್ಗ ತಾಲ್ಲೂಕಿನಲ್ಲಿ ವಿದ್ಯುನ್ಮಾನ ಯಂತ್ರಗಳಾಗಲೀ ಫಿಂಗರ್ ಪ್ರಿಂಟ್ ಕಂಡುಹಿಡಿಯುವ ಯಂತ್ರವಾಗಲೀ ಇ ಲ್ಲದೇ ಇ ರುವುದರಿಂದ ಆದರೂ ಪ್ರಪತ್ರ 5 ರ ಮೇಲಿನ ಹೆಬ್ಬೆಟ್ಟಿನ ಗುರುತು ನಾಮ ಪತ್ರ ಸಲ್ಲಿಸಿದ ಹೆಬ್ಬೆಟ್ಟಿನ ಗುರುತು ಅಧಿಕಾರ ಪತ್ರದಲ್ಲಿಯ ಹೆಬ್ಬೆಟ್ಟಿನ ಗುರುತು ಹೋಲಿಕೆ ಮಾಡಿದಾಗ ನನಗೆ ಹೊಂದಾಣಿಕೆ ಕಂಡ ಪ್ರಯುಕ್ತ ಪ್ರಪತ್ರ 5 ಅನ್ನು ಸ್ವೀಕರಿಸಿದ್ದೇನೆಂದು ದೃಢೀಕರಿಸುತ್ತೇನೆ. ಚುನಾವಣಾಧಿಕಾರಿಗಳಿಗೆ ಕೊಟ್ಟ ಕೈಪಿಡಿಯಲ್ಲಿ ಹೆಬ್ಬೆಟ್ಟಿನ ಗುರುತು ಇ ದ್ದಂತಹ ಸಮಯದಲ್ಲಿ ಏನು ಪರಿಹಾರ ಸೂಚಿಸಬೇಕೆಂದು ಎಲ್ಲಿಯೂ ಸ್ಪಷ್ಟಪಡಿಸದೆ ಅಭ್ಯರ್ಥಿಯ ಪರವಾಗಿ ಏಜೆಂಟ್, ಸೂಚಕರೂ ಸ್ವತ: ಬಂದು ಪ್ರಪತ್ರ 5 ಮತ್ತು ಅಧಿಕಾರ ಪತ್ರ ತಂದು ಕೊಟ್ಟ ಪ್ರಯುಕ್ತ ಪ್ರಪತ್ರ 5 ಅನ್ನು ನಾನು ಸ್ವೀಕರಿಸಿದ್ದೇನೆಂದು ದೃಢೀಕರಿಸುತ್ತೇನೆ. ಶ್ರೀ ಶರಣಪ್ಪ ದೇವದುರ್ಗ ಇ ವರು ಶ್ರೀಮತಿ ಉಮಾದೇವಿ ಇ ವರ ನಾಮಪತ್ರ ಹಿಂತೆಗೆದುಕೊಳ್ಳುವ ಅಧಿಕಾರ ಪತ್ರ ನೀಡಿರುವ ಎಲ್ಲಾ ಹಾಗೂ ಪ್ರಪತ್ರ 5 ರ ಮೇಲೆ ಶ್ರೀಮತಿ ಉಮಾದೇವಿಯವರ ಹೆಬ್ಬೆಟ್ಟಿನ ಗುರುತು ಇ ರುವುದಿಲ್ಲ ಎಂದು ಅರ್ಜಿ ಸಲ್ಲಿಸಿದಾಗ ದಿನಾಂಕ:25.6.2001 ರಂದು ಸಮಯ 2.40 ಗಂಟೆಯಾಗಿತ್ತು. ಉಳಿದ 20 ನಿಮಿಷದಲ್ಲಿ ನನ್ನ ಚುನಾವಣೆಯ ಕಾರ್ಯಾಲಯದ ಕೆಲಸ ಮುಗಿಸಬೇಕಾಗಿ ರುವುದರಿಂದ ಅವರ ಅರ್ಜಿ ಸ್ವೀಕೃತಿ ಮಾಡಿಕೊಂಡಿದ್ದೇನೆ. ಆದರೆ ಶ್ರೀ ಶರಣಪ್ಪ ಎಂಬ ವ್ಯಕ್ತಿ ಅಭ್ಯರ್ಥಿಯು ಅಲ್ಲ ಹಾಗೂ ಸೂಚಕನೂ ಅಲ್ಲದ ಕಾರಣ ಆತನ ತಕರಾರು ಅರ್ಜಿಗೆ ಯಾವುದೇ ಹಿಂಬರಹ ನೀಡಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

2. ಶ್ರೀಮತಿ ಸಿದ್ದಮ್ಮ ಮತ್ತು ಇ ತರರೊಂದಿಗೆ ಶಾಮೀಲಾಗಿ ಶ್ರೀಮತಿ ಉಮಾದೇವಿಯವರ ನಾಮಪತ್ರ ಹಿಂತೆಗೆದುಕೊಂಡ ಬಗ್ಗೆ ಪರಿಶೀಲನೆ:

(ಅ) ಸಾಕ್ಷಾದಾರ ಅ.ನ.1-ಶ್ರೀಮತಿ ಉಮಾದೇವಿ ತಮ್ಮ ಹೇಳಿಕೆಯಲ್ಲಿ ನಾಮಪತ್ರ ಹಾಕುವ ಸಮಯದಲ್ಲಿ ಮಾತ್ರ ಹೆಬ್ಬೆಟ್ಟಿನ ಗುರುತು ಹಾಕಿದ್ದೇನೆ, ನಾಮಪತ್ರ ಹಿಂತೆಗೆದುಕೊಳ್ಳುವ ಸಮಯದಲ್ಲಿ ಊರಲ್ಲಿ ಇ ರಲಿಲ್ಲ. ಹಿಂತೆಗೆದುಕೊಳ್ಳುವ ಅಧಿಕಾರ ಪತ್ರ ನೀಡಿರುವುದಿಲ್ಲ. ಉಳಿದ ಎಲ್ಲಾ ದಾಖಲೆಗಳಿಗೆ ಶ್ರೀಮತಿ ಸಿದ್ದಮ್ಮನವರೇ ಹೆಬ್ಬೆಟ್ಟಿನ ಗುರುತು ಹಾಕಿ ಅಧಿಕಾರಿಗಳಿಗೆ ಹಾಜರುಪಡಿಸಿ ನಾಮಪತ್ರ ಹಿಂತೆಗೆದುಕೊಳ್ಳುವುದಕ್ಕೆ ಕಾರಣರಾಗಿ ನನಗೆ ಮೋಸ ಮಾಡಿದ್ದಾರೆ ಎಂದು ಸ್ವತ: ಶ್ರೀಮತಿ ಉಮಾದೇವಿ ಹೇಳಿದ್ದಾರೆ. ಚುನಾವಣೆ ಅಧಿಕಾರಿ ಕೈಪಿಡಿಯಲ್ಲಿ ಅಭ್ಯರ್ಥಿಯ ಪರವಾಗಿ ಸೂಚಕರ ಪ್ರಪತ್ರ-5 ಅಧಿಕಾರ ಪತ್ರ ತಂದರೆ ನಾಮಪತ್ರ ಹಿಂತೆಗೆದುಕೊಳ್ಳಬಹುದು ಎಂಬ ನಿರ್ದೇಶನವಿದ್ದ ಪ್ರಕಾರ ಸ್ವತ: ಸೂಚಕರೇ ಹಾಜರಿದ್ದ ಪ್ರಯುಕ್ತ ಪ್ರಪತ್ರ 5 ನ್ನು ಸ್ವೀಕರಿಸಿದ್ದೇನೆಂದು ದೃಢೀಕರಿಸುತ್ತೇನೆ.

(ಆ) ಸಾಕ್ಷಿದಾರ ಅ.ನ.2. ಶ್ರೀ ಶರಣಪ್ಪ ದೇವದುರ್ಗ ಇ ವರ ಹೇಳಿಕೆಯಲ್ಲಿ ಶ್ರೀಮತಿ ಸಿದ್ದಮ್ಮ ಸೂಚಕರು ನಾಮಪತ್ರ ಹಿಂತೆಗೆದು ಕೊಳ್ಳಲು ಕಚೇರಿಯಿಂದ ಬರುವಾಗ ಶ್ರೀ ಮುನೀರ್ ಪಾಷ ಮತ್ತು ಶ್ರೀ ಶಾಂತಪ್ಪ ಜೊತೆಗೆ ಇ ದ್ದರು ಎಂದು ಹೇಳಿದ್ದಾರೆ.

ಅವರು ಯಾರು ನನ್ನ ಕಚೇರಿಗೆ ಬಂದಿರುವುದಿಲ್ಲ. ಅವರು ನನಗೆ ಪರಿಚಯವಿಲ್ಲ. ಶ್ರೀಮತಿ ಸಿದ್ದಮ್ಮರವರೇ ಸ್ವತ: ತಾನೇ ನನ್ನ ಕಚೇರಿಗೆ ಬಂದು ಪ್ರಪತ್ರ 5 ಅಧಿಕಾರ ಪತ್ರ ಒಪ್ಪಿಸಿದ ಪ್ರಯುಕ್ತ ಪ್ರಪತ್ರ 5 ಅನ್ನು ಸ್ವೀಕರಿಸಿದ್ದೇನೆ. ಶ್ರೀಮತಿ ಉಮಾದೇವಿಯವರು ಊರಲ್ಲಿ ಇರುವುದಿಲ್ಲ ಎಂಬ ಅಂಶ ನನ್ನ ಗಮನಕ್ಕೆ ಬಂದಿದ್ದು ದಿನಾಂಕ:25.6.2001 ಸಾಯಂಕಾಲ 5 ಗಂಟೆ ಸಮಯಕ್ಕೆ ಸ್ವತ: ಸಿದ್ದಮ್ಮಳೇ ಉಮೇದುವಾರಿಕೆ ಹಿಂದಕ್ಕೆ ಪಡೆಯುವ ಪತ್ರಕ್ಕೆ ಸಹಿಮಾಡಿರುತ್ತೇನೆಂದು ದಿನಾಂಕ: 6.10.2001 ರಂದು ಶ್ರೀ ನಂದಕುಮಾರ್, ಕಾರ್ಯದರ್ಶಿ, ರಾಜ್ಯ ಚುನಾವಣೆ ಆಯೋಗದ ಎದುರು ಒಪ್ಪಿಕೊಂಡಿದ್ದರಿಂದ ಚುನಾವಣೆ ಅಧಿಕಾರಿಯಾಗಿ ನಾನು ಶಾಮೀಲಾಗಿಲ್ಲವೆಂದು ದೃಢೀಕರಿಸುತ್ತೇನೆ. ಶ್ರೀಮತಿ ಉಮಾದೇವಿಯವರು ಚುನಾವಣೆ ಪ್ರಾರಂಭದಿಂದ ನಾಮಪತ್ರ ಹಿಂತೆಗೆದುಕೊಳ್ಳುವವರೆಗೆ ಊರಲ್ಲಿ ಇರದೆ ಸೂಚಕಳಾದ ಶ್ರೀಮತಿ ಸಿದ್ದಮ್ಮರವರ ಮೇಲೆ ಅವಲಂಬಿತರಾಗಿದ್ದು ಚುನಾವಣೆಯಲ್ಲಿ ಸೋತ ಸೇಡನ್ನು ಚುನಾವಣೆ ಅಧಿಕಾರಿಯ ಮೇಲೆ ಸೇಡು ತೀರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಶ್ರೀಮತಿ ಉಮಾದೇವಿಯವರು ನಾಮಪತ್ರ ಸಲ್ಲಿಸಿ ಯಾವುದೋ ಒತ್ತಡಕ್ಕೆ ಮಣಿದು ಊರುಬಿಟ್ಟು ಹೋಗಿ ಇಲ್ಲದ ಅಪರಾದ ಚುನಾವಣಾಧಿಕಾರಿ ಮೇಲೆ ಹೊರಿಸಿದ್ದಾರೆಂದು ದೃಢೀಕರಿಸುತ್ತೇನೆ. ಚುನಾವಣೆ ಅಧಿಕಾರಿ ಇ ತರರೊಂದಿಗೆ ಶಾಮೀಲು ಆಗಿದ್ದರೆ ಶ್ರೀಮತಿ ಉಮಾದೇವಿಯವರ ನಾಮಪತ್ರ ಪರಿಶೀಲನೆಯ ಹಂತದಲ್ಲಿ ತಿರಸ್ಕರಿಸಬಹುದಿತ್ತು. ನಾಮಪತ್ರ ಹಿಂತೆಗೆದುಕೊಳ್ಳುವ ದಿನಾಂಕದವರೆಗೆ ಕಾಯಬೇಕಾಗುತ್ತಿರಲಿಲ್ಲವೆಂದು ಚುನಾವಣೆ ಅಧಿಕಾರಿಯಾದ ನಾನು ಯಾವುದೇ ತಪ್ಪು ಮಾಡಿಲ್ಲ.

3. ಚುನಾವಣೆ ಆಯೋಗದ ನೀತಿ ಸಂಹಿತೆಯನ್ನು ಉಲ್ಲಂಘಿಸಲಾಗಿದೆ ಎಂದು ವಿಚಾರಣಾ ಧಿಕಾರಿಯವರ ಹೇಳಿಕೆಗೆ ನನ್ನ ಪ್ರತಿರಕ್ಷಣಾ ಹೇಳಿಕೆ ಕೆಳಗಿನಂತಿದೆ.

(ಅ) ತಾಲ್ಲೂಕಿನ ಚುನಾವಣೆ ಅಧಿಕಾರಿಯಾದ ತಹಶೀಲ್ದಾರರು ಕೂಡ ಪ್ರಭಾರಿಯಾಗಿದ್ದು, ನನಗೆ ಸರಿಯಾದ ತರಬೇತಿ ನೀಡಿರುವುದಿಲ್ಲ. ಚುನಾವಣೆ ಅಧಿಕಾರಿಗೆ ಸಂಬಂಧಿಸಿದ ನೀತಿ ನಿಯಮಗಳು, ಪುಸ್ತಕಗಳನ್ನು ಒದಗಿಸಿರುವುದಿಲ್ಲ.

(ಆ) ನಾನು ಮೊದಲನೆಯ ಸಲ ಚುನಾವಣಾಧಿಕಾರಿ ಎಂದು ನೇಮಕಗೊಂಡ ಪ್ರಯುಕ್ತ ಚುನಾವಣೆಗೆ ಸಂಬಂಧಪಟ್ಟ ಸರಿಯಾದ ಮಾಹಿತಿ ನೀಡದೆ ಇದ್ದರೂ ಸಹಿತ ನಾಮಪತ್ರ ಸ್ವೀಕಾರ ದಿನದಿಂದ ನಾಮಪತ್ರ ಹಿಂತೆಗೆದುಕೊಳ್ಳುವವರೆಗೆ ನಿಷ್ಠೆಯಿಂದ ಕರ್ತವ್ಯ ನಿರ್ವಹಿಸಿದ್ದೇನೆ.

(ಇ) ನನಗೆ ಕೊಟ್ಟ ಚುನಾವಣೆ ಅಧಿಕಾರಿಯ ಕೈಪಿಡಿಯ ಪುಸ್ತಕದಲ್ಲಿ ಹೆಬ್ಬೆಟ್ಟಿನ ಗುರುತು ಇರುವ ಸಂದರ್ಭದಲ್ಲಿ ಏನು ಮಾಡಬೇಕೆಂದು ಸ್ಪಷ್ಟವಾಗಿ ತೋರಿಸದೇ ಇರುವುದರಿಂದ ಅಭ್ಯರ್ಥಿಯ ಪರವಾಗಿ ಸೂಚಕಳೇ ಪ್ರಪತ್ರ 5 ಅಧಿಕಾರ ಪತ್ರ ತಂದರೆ ಸ್ವೀಕರಿಸಬೇಕೆಂದು ಇರುವುದರಿಂದ ಪ್ರಪತ್ರ 5 ಅಧಿಕಾರಿ ಪತ್ರವನ್ನು ಸ್ವೀಕರಿಸಲಾಯಿತು. ಇದರಲ್ಲಿ ಯಾವುದೇ ದುರುದ್ದೇಶ ಕಾರಣ ಇರುವುದಿಲ್ಲ.

(ಈ) ಶ್ರೀಮತಿ ಉಮಾದೇವಿಯವರ ನಾಮಪತ್ರ ಹಿಂತೆಗೆದುಕೊಳ್ಳಲು ಸೂಚಕಳಾದ ಶ್ರೀಮತಿ ಸಿದ್ದಮ್ಮಳು ಪ್ರಪತ್ರ 5 ಅಧಿಕಾರ ಪತ್ರ ತಂದುಕೊಟ್ಟಾಗ ದಿನಾಂಕ:25.6.2001 ಸಮಯ ಮಧ್ಯಾಹ್ನ 1.15 ಗಂಟೆ ಎಂದು ದಾಖಲಿಸಿದ್ದೇನೆ.

(ಉ) ಹೆಬ್ಬೆಟ್ಟಿನ ಗುರುತು ಇರುವುದರಿಂದ ನಾನು ನಾಮಪತ್ರ ದಾಖಲಿಸಿದಾಗ ಮತ್ತು ನಾಮಪತ್ರ ಹಿಂತೆಗೆದುಕೊಳ್ಳುವಾಗ ಶ್ರೀಮತಿ ಸಿದ್ದಮ್ಮಳು ಸ್ವತ: ಹಾಜರಿದ್ದ ಕಾರಣ ನನಗೆ ತಿಳಿದ ಮಟ್ಟಿಗೆ ಹೋಲಿಕೆ ಕಂಡುಬಂದ ಕಾರಣ ನಾಮಪತ್ರ ಹಿಂತೆಗೆದು ಕೊಳ್ಳುವ ಪ್ರಪತ್ರ 5 ಅನ್ನು ಸ್ವೀಕರಿಸಿದ್ದೇನೆ.

(ಊ) ಹೆಬ್ಬೆಟ್ಟಿನ ಗುರುತನ್ನು ಕೂಲಂಕಷವಾಗಿ, ತೀಕ್ಷ್ಣವಾಗಿ ಪರಿಶೀಲಿಸಲು ಯಾವುದೇ ಯಂತ್ರೋಪಕರಣ ಇಲ್ಲದಿರುವುದರಿಂದ ಹಾಗೂ ಈ ವಿಷಯದಲ್ಲಿ ಪರಿಣಿತನಾಗಿರದೇ ಇರುವುದರಿಂದ ಹಾಗೂ ಸಮಯದ ಅಭಾವವಿರುವುದರಿಂದ ಕೂಲಂಕಷವಾಗಿ ಪರಿಶೀಲಿಸಲು ಸಾಧ್ಯವಾಗಿಲ್ಲವೆಂದು ದೃಢೀಕರಿಸುತ್ತೇನೆ.

(ಋ) ನಾನು ಒಬ್ಬ ಸರ್ಕಾರಿ ನೌಕರನಾಗಿದ್ದು, ಸರ್ಕಾರಿ ಆದೇಶ ಪಾಲಿಸುವುದೇ ನನ್ನ ಕರ್ತವ್ಯವಾಗಿದ್ದು ಅದರಂತೆ ಜವಾಬ್ದಾರಿಯಿಂದ ಕರ್ತವ್ಯ ನಿರ್ವಹಿಸಿದ್ದೇನೆ. ಯಾರೊಂದಿಗೂ ಶಾಮೀಲಾಗಿಲ್ಲವೆಂದು ದೃಢೀಕರಿಸುತ್ತೇನೆ.

(ಎ) ಈ ಎಲ್ಲಾ ಕಾರಣದಿಂದ ಚುನಾವಣೆ ನೀತಿ ಸಂಹಿತೆಯ ನಿರ್ದೇಶನವನ್ನು ಉಲ್ಲಂಘಿಸಿಲ್ಲದಿರುವುದರಿಂದ ದೋಷಮುಕ್ತರನ್ನಾಗಿಸುವಂತೆ ಕೋರುತ್ತೇನೆ.

ವಿಚಾರಣಾ ವರದಿಯಲ್ಲಿನ ನಿರ್ಣಯ, ವಿಚಾರಣಾ ವರದಿಯಲ್ಲಿನ ನಿರ್ಣಯದ ಮೇಲೆ ಆಪಾದಿತರು ನೀಡಿರುವ ಹೇಳಿಕೆ ಹಾಗೂ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಹಾಗೂ ಎಲ್ಲಾ ದಾಖಲೆಗಳ ಹಿನ್ನಲೆಯಲ್ಲಿ ಆಪಾದಿತರಾದ ಶ್ರೀ ರಾಮಚಂದ್ರ, ಇವರು ದೇವದುರ್ಗ ಪಟ್ಟಣ ಪಂಚಾಯಿತಿಯ ಚುನಾವಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀಮತಿ ಉಮಾದೇವಿ ಎಂಬುವರ ನಾಮಪತ್ರವನ್ನು ಹಿಂದಕ್ಕೆ ಪಡೆಯುವ ಸಮಯದಲ್ಲಿ ಶ್ರೀಮತಿ ಉಮಾದೇವಿಯವರಿಗೆ ಸೂಚಕರಾದ ಶ್ರೀಮತಿ ಸಿದ್ದಮ್ಮ, ಇವರು ಖೋಟ್ಟೆ ಅಧಿಕಾರ ಪತ್ರವನ್ನು ತಯಾರಿಸಿ ಉಮೇದುವಾರಿಕೆ ಹಿಂತೆಗೆದುಕೊಳ್ಳುವ ನೋಟಿಸನ್ನು ಸಲ್ಲಿಸುವಾಗ ಕರ್ನಾಟಕ ಮುನಿಸಿಪಾಲಿಟಿಗಳ (ಕೌನ್ಸಿಲರುಗಳ ಚುನಾವಣೆ) ನಿಯಮಾವಳಿ 1977 ರ ನಿಯಮ 20 ರಂತೆ ಕ್ರಮ ಜರುಗಿಸಿರುವುದಿಲ್ಲ. ಹಾಗೂ

ನಗರಸಭೆ, ಪುರಸಭೆ, ಟೌನ್ ಪಂಚಾಯಿತಿ ಚುನಾವಣೆಗಳಿಗೆ ರಿಟರ್ನಿಂಗ್ ಅಧಿಕಾರಿಗಳಿಗೆ ಸೂಚನೆಗಳ ಪುಸ್ತಕದ ಕಂಡಿಕೆ 8 ರಲ್ಲಿನ ಸೂಚನೆಗಳನ್ನು ಉಲ್ಲಂಘನೆ ಮಾಡಿರುವ ಆರೋಪವು ಸಾಬೀತಾಗಿದೆ. ಆದ್ದರಿಂದ ಆಪಾದಿತರ ಹೇಳಿಕೆಯನ್ನು ತಳ್ಳಿಹಾಕಿ, ವಿಚಾರಣಾಧಿಕಾರಿಗಳ ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ಸರ್ಕಾರವು ಸಂಪೂರ್ಣವಾಗಿ ಒಪ್ಪಿದೆ. ಹಾಗೂ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಇ ಡಿ 7 ಡಿಜಿಡಿ 2002, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2004**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 8(iv-a) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ರಾಮಚಂದ್ರ, ಕ್ಷೇತ್ರ ಸಂಪನ್ಮೂಲ ಕೇಂದ್ರದ ಸಮನ್ವಯಾಧಿಕಾರಿ, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ, ಅವರ ವೇತನವನ್ನು ವೇತನ ಶ್ರೇಣಿ ರೂ. 6000-150-7200-200-8800-260-10880-320-11200 ರಲ್ಲಿನ ಕನಿಷ್ಠಹಂತ ರೂ 6000/-(ಆರು ಸಾವಿರ ರೂಪಾಯಿಗಳು ಮಾತ್ರ) ಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 5(ಐದು)ವರ್ಷಗಳ ಅವಧಿಗೆ ಇ ಳಿಸಿ ಆದೇಶಿಸಿದೆ, ಮತ್ತು ದಂಡನೆಯ ಈ ಅವಧಿಯಲ್ಲಿ ಅಧಿಕಾರಿಯ ಮೂಲ ವೇತನವು ಮಾಸಿಕ ರೂ 6000/-(ಆರು ಸಾವಿರ ರೂ. ಗಳು)ದಲ್ಲೇ ಸ್ಥಿರವಾಗಿರುತ್ತದೆ,ಮತ್ತು ದಂಡನೆಯ ಅವಧಿ 5(ಐದು) ವರ್ಷಗಳು ಮುಗಿದ ನಂತರ ಅವರ ಕನಿಷ್ಟ ವೇತನದ ನಂತರ ಸಿಗುವ ಮೊದಲನೇ ವಾರ್ಷಿಕ ವೇತನದ ಬಡ್ತಿಯನ್ನು ಪಡೆಯಲು ಅರ್ಹರಾಗಿರುತ್ತಾರೆ.ಹಾಗೂ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತಿನಲ್ಲಿಯೇ ಕಳೆದ ಅವಧಿಯೆಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1111

**ಎಫ್.ಆರ್.ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶೀ, ಶಿಕ್ಷಣ ಇ ಲಾಖೆ.(ಸೇ 1,2)

**ವಿಷಯ:** ಶ್ರೀ ಎಸ್ ಎನ್.ಪೋಲಿಸ್ ಪಾಟೀಲ್, ಉಪನ್ಯಾಸಕರು, ಸಿಟಿಇ , ಗುಲ್ಬರ್ಗಾ, ಶ್ರೀ ಎಸ್.ಟಿ.ಬೇಗಾರ್, ಉಪಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಲಿಂಗಸಗೂರು, ರಾಯಚೂರು ಜಿಲ್ಲೆ, ಹಾಗೂ ಶ್ರೀ ಹೆಚ್.ಹೆಚ್.ಬೂದುಗುಂಪ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ರಾಯಚೂರು, ಇ ವರುಗಳ ಮೇಲಿನ ಆರೋಪಗಳಿಗೆ ಜಂಟಿ ಇ ಲಾಖಾ ವಿಚಾರಣೆ ನಡೆಸಲು ಅಪರ ನಿರ್ದೇಶಕರು,(ಆಡಳಿತ) ಆಯುಕ್ತರ ಕಚೇರಿ, ಸಾರ್ವಜನಿಕ ಶಿಕ್ಷಣ ಇ ಲಾಖೆ, ಬೆಂಗಳೂರು, ಇ ವರನ್ನು ಶಿಸ್ತು ಪ್ರಾಧಿಕಾರಿಯಾಗಿ ನೇಮಕ ಮಾಡುವ ಬಗ್ಗೆ-ಆದೇಶಗಳು

**ಓದಲಾಗಿದೆ:** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಬೆಂಗಳೂರು, ಇ ವರ ಪ್ರಸ್ತಾವನೆ ಸಂಖ್ಯೆ:ಸಿ2(1) ಪಅದೂ 25:2001-02 ದಿ:7.6.2003

**ಪ್ರಸ್ತಾವನೆ:-**

ಮೇಲೆ ಓದಲಾದ ದಿನಾಂಕ:7.6.2003 ರ ಪ್ರಸ್ತಾವನೆಯ ಮೂಲಕ ಕೆಳಕಂಡ ಅಧಿಕಾರಿಗಳು ಕರ್ನಾಟಕ ಆರ್ಥಿಕ ಸಂಹಿತೆಯಲ್ಲಿನ ಅನುಚ್ಛೇದಗಳನ್ನು ಉಲ್ಲಂಘಿಸಿ ಹಣಕಾಸಿನ ಅವ್ಯವಹಾರ ನಡೆಸಿದ್ದಾರೆಂದು, ಆದ್ದರಿಂದ ಇ ವರುಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಸಾರ್ವಜನಿಕ ಶಿಕ್ಷಣ ಇ ಲಾಖಾ ಆಯುಕ್ತರು ಕೋರಿದ್ದಾರೆ.

1. ಶ್ರೀ ಎಸ್.ಎನ್.ಪೋಲೀಸ್ ಪಾಟೀಲ್, ಇ ವರು ಈ ಹಿಂದೆ ಬಿಇ ಒ ಲಿಂಗಸಗೂರು, ಇ ಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಹಣಕಾಸಿನ ಅವ್ಯವಹಾರಕ್ಕೆ ಸಂಬಂಧಿಸಿದಂತೆ 13 ಆರೋಪಗಳನ್ನು ಎಸಗಲು ಕಾರಣರಾಗಿದ್ದಾರೆ.
2. ಶ್ರೀ ಎಸ್.ಟಿ.ಬೇಗಾರ್, ಇ ವರು ಈ ಹಿಂದೆ ಪ್ರಭಾರಿ ಬಿಇ ಒ ಆಗಿ ಲಿಂಗಸಗೂರು ಇ ಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಯೋಜನೆಯಡಿಯಲ್ಲಿ ಖಾಸಗಿ ಅನುದಾನಿತ ಶಾಲೆಗಳಿಗೆ ರೂ.1.910 ಲಕ್ಷಗಳನ್ನು ಹೆಚ್ಚುವರಿಯಾಗಿ ಖರ್ಚು ಭರಿಸಿ ಅಧಿಕಾರ ವ್ಯಾಪ್ತಿ ಮೀರಿ ಸರ್ಕಾರಿ ಹಣ ದುರುಪಯೋಗ ಹಾಗೂ ಆರ್ಥಿಕ ನಿಯಮಗಳ ಉಲ್ಲಂಘನೆ ಮಾಡಿದ್ದಾರೆ.
3. ಶ್ರೀ ಹೆಚ್.ಹೆಚ್.ಬೂದಗುಂಪ, ಉಪನಿರ್ದೇಶಕರು, ರಾಯಚೂರು, ಇ ವರು ಲಿಂಗಸಗೂರು ತಾಲ್ಲೂಕಿನ ಬಿಇ ಒ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ ಆರ್ಥಿಕ ವ್ಯವಹಾರಕ್ಕೆ ಸಂಬಂಧಿಸಿದಂತೆ 5 ಆರೋಪಗಳನ್ನು ಎಸಗಿ ಆರ್ಥಿಕ ನಿಯಮಗಳನ್ನು ಉಲ್ಲಂಘಿಸಿ ಅಧಿಕಾರ ದುರುಪಯೋಗ ಹಾಗೂ ಸರ್ಕಾರಿ ಹಣ ದುರುಪಯೋಗಪಡಿಸಲು ಕಾರಣರಾಗಿದ್ದಾರೆ.

ಮೇಲ್ಕಂಡ 3 ಅಧಿಕಾರಿಗಳು ಲಿಂಗಸಗೂರು ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಆರ್ಥಿಕ ಸಂಹಿತೆ ನಿಯಮಗಳನ್ನು ಉಲ್ಲಂಘಿಸಿರುವುದಲ್ಲದೆ, ಸರ್ಕಾರಿ ಹಣವನ್ನು ದುರುಪಯೋಗಪಡಿಸಿಕೊಳ್ಳಲು ನೇರ ಕಾರಣರಾಗಿರುವುದು ಆಯುಕ್ತರ ಪ್ರಸ್ತಾವನೆಯಿಂದ ಮೇಲ್ನೋಟಕ್ಕೆ ಸತ್ಯಾಂಶದಿಂದ ಕೂಡಿರುವುದು ಕಂಡುಬಂದಿದೆ. ಆದ್ದರಿಂದ ಅವರುಗಳು ಎಸಗಿರುವ ಆರೋಪದ ಮೇರೆಗೆ ಅವರುಗಳ ವಿರುದ್ಧ ಜಂಟಿ ಇ ಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 13 ರಂತೆ ಜಂಟಿ ಇ ಲಾಖಾ ವಿಚಾರಣೆಯನ್ನು ನಡೆಸಲು ಅಪರ ನಿರ್ದೇಶಕರು, (ಆಡಳಿತ) ಆಯುಕ್ತರ ಕಚೇರಿ, ಸಾರ್ವಜನಿಕ ಶಿಕ್ಷಣ ಇ ಲಾಖೆ, ಬೆಂಗಳೂರು ಅವರನ್ನು ಸರ್ಕಾರವು ಶಿಸ್ತು ಪ್ರಾಧಿಕಾರಿಯನ್ನಾಗಿ ನೇಮಕ ಮಾಡಲು

ಹಾಗೂ ಸಿಸಿಎ ನಿಯಮ 11-11ಎ ಅನ್ವಯ ಇ ಲಾಖಾ ವಿಚಾರಣೆಯನ್ನು ನಡೆಸಲು ಹಾಗೂ ಇ ದೇ ಸಿಸಿಎ ನಿಯಮಗಳಡಿಯಲ್ಲಿ ನಿಯಮ 8 ರಲ್ಲಿನ ಲಘು ದಂಡನೆಗಳಾದ 8(ii) ಮತ್ತು (iii)(iiiಎ)(iv) ಮತ್ತು (ivಎ) ಅನ್ನು ವಿಧಿಸಲು ಅವರಿಗೆ ಅಧಿಕಾರವನ್ನು ನೀಡುವುದು ಉಚಿತವೆಂದು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇ ಡಿ 165 ಡಿಜಿಡಿ 2002ಬೆಂಗಳೂರು, ದಿನಾಂಕ: 30ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣದಿಂದಾಗಿ ಶ್ರೀ ಎಸ್ ಎನ್.ಪೋಲಿಸ್ ಪಾಟೀಲ್, ಉಪನ್ಯಾಸಕರು, ಸಿಟಿಇ , ಗುಲ್ಬರ್ಗಾ, ಶ್ರೀ ಎಸ್.ಟಿ.ಬೇಗಾರ್, ಉಪಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಲಿಂಗಸಗೂರು, ರಾಯಚೂರು ಜಿಲ್ಲೆ, ಹಾಗೂ ಶ್ರೀ ಹೆಚ್.ಹೆಚ್.ಬೂದುಗುಂಪ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ರಾಯಚೂರು, ಇ ವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13 ಹಾಗೂ 11 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅಪರ ನಿರ್ದೇಶಕರು, (ಆಡಳಿತ) ಆಯುಕ್ತರ ಕಚೇರಿ, ಸಾರ್ವಜನಿಕ ಶಿಕ್ಷಣ ಇ ಲಾಖೆ, ಬೆಂಗಳೂರು, ಅವರನ್ನು ಶಿಸ್ತು ಪ್ರಾಧಿಕಾರಿಯಾಗಿ ನೇಮಕ ಮಾಡಿದೆ.

2. ಶ್ರೀ ಎಸ್.ಎನ್.ಪೋಲೀಸ್ ಪಾಟೀಲ್, ಶ್ರೀ ಎಸ್.ಟಿ.ಬೇಗಾರ್ ಹಾಗೂ ಶ್ರೀ ಹೆಚ್.ಹೆಚ್.ಬೂದಗುಂಪ, ಇ ವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8ರಲ್ಲಿನ ದಂಡನೆ (ii)(iii)(iiiಎ), (iv) ಮತ್ತು (ivಎ) ಅನ್ನು ವಿಧಿಸಲು ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ.
3. ವಿಚಾರಣೆಯ ನಂತರ ಶ್ರೀ ಎಸ್.ಎನ್.ಪೊಲೀಸ್ ಪಾಟೀಲ್, ಶ್ರೀ ಎಸ್.ಟಿ.ಬೇಗಾರ್ ಹಾಗೂ ಶ್ರೀ ಹೆಚ್.ಹೆಚ್.ಬೂದಗುಂಪ, ಇ ವರುಗಳಿಗೆ ಕಠಿಣ ದಂಡನೆ ವಿಧಿಸುವ ಅವಶ್ಯಕತೆಯಿದೆ ಎಂದು ಕಂಡುಬಂದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(21)(ಎ) ರನ್ವಯ ಶಿಫಾರಸ್ಸನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.
4. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು ನಿಯಮ 11 ಹಾಗೂ 11ಎ ಗ ಳಲ್ಲಿ ನಿಗದಿಪಡಿಸಿದ ಕ್ರಮ ಅನುಸರಿಸತಕ್ಕದ್ದು ಮತ್ತು ಈ ಪ್ರಕರಣದ ವಿಚಾರಣೆಯನ್ನು ಈ ಆದೇಶ ಹೊರಡಿಸಿದ 3 ತಿಂಗಳೊಳಗೆ ವಿಲೇವಾರಿ ಮಾಡಲು ಸರ್ಕಾರವು ನಿರ್ದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1126

**ಎಫ್.ಆರ್.ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ.(ಸೇ-1,2)

**ವಿಷಯ:** ಶ್ರೀ ಕೆ.ಮುರಿಗೆಪ್ಪ, ಹಿರಿಯ ಉಪನ್ಯಾಸಕರು,(ನಿವೃತ್ತ) ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಶಿವಮೊಗ್ಗ, ಇ ವರ ಶಿಸ್ತು ಪ್ರಕರಣದಲ್ಲಿ ಅಂತಿಮ ಆದೇಶ.

**ಓದಲಾಗಿದೆ:**
1. ದಿ:11.12.96ರ ಕಾರಣ ಕೇಳುವ ನೋಟಿಸ್ ನಂ.ಇ ಡಿ 222 ಡಿಜಿಡಿ96
2. ದಿ:27.12.96ರಂದು ಶ್ರೀ ಕೆ.ಮುರಿಗೆಪ್ಪ,ಅವರು ಸಲ್ಲಿಸಿದ ರಕ್ಷಣಾಹೇಳಿಕೆ
3. ದಿ:25.2.97 ರ ಆದೇಶ ನಂ.ಇ ಡಿ 222 ಡಿಜಿಡಿ 96
4. ದಿ:7.4.2001 ರ ವಿಚಾರಣಾಧಿಕಾರಿಗಳ ಪತ್ರ ಸಂ.ಎ1.ಇ ಲಾಖಾ ವಿಚಾರಣೆ.17:96-97.
5. ದಿ:19.7.2001 ರ 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇ ಡಿ 222 ಡಿಜಿಡಿ 96
6. ಶ್ರೀ ಮುರಿಗೆಪ್ಪನವರ ದಿ:6.8.2001 ರ ಪ್ರತಿರಕ್ಷಣಾ ಹೇಳಿಕೆ.
7. ದಿ:15.7.2004 ರ ಕರ್ನಾಟಕ ಲೋಕಸೇವ ಆಯೋಗದ ಪತ್ರ ಸಂ: ಪಿಎಸ್‌ಸಿ 43 ಸಿಎಸ್‌ಎಸ್ 2004

ಶ್ರೀ ಕೆ.ಮುರಿಗೆಪ್ಪ ಅವರು ಹಿಂದೆ ಸಹಾಯಕ ಶಿಕ್ಷಣಾಧಿಕಾರಿಗಳಾಗಿ ಸಾಗರ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ನಿಯಮಬಾಹಿರವಾಗಿ ಆಡಳಿತಾತ್ಮಕ ಮತ್ತು ಹಣಕಾಸು ದುರುಪಯೋಗ ಆರೋಪಗಳ ಸಂಬಂಧ, ಅವರಿಗೆ ಸಿಸಿಎ-11 ರ ನಿಯಮದ ಮೇರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ:11.12.96 ರ ಕಾರಣ ಕೇಳುನ ನೋಟೀಸ್ ಮೂಲಕ ಆರೋಪಣಾ ಪಟ್ಟಿಯನ್ನು ಜಾರಿಮಾಡಲಾಗಿತ್ತು. ಸದರಿ ನೋಟೀಸಿಗೆ ಆಪಾದಿತರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ದಿನಾಂಕ:27.12.96 ರಂದು ಸಲ್ಲಿಸಿದ ರಕ್ಷಣಾ ಹೇಳಿಕೆಯಲ್ಲಿ ಆಪಾದನೆಗಳನ್ನು ನಿರಾಕರಿಸಿರುವ ಕಾರಣ ಆರೋಪಗಳ ಸತ್ಯಾಸತ್ಯತೆಯನ್ನು ತಿಳಿಯಲು ಇ ಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ:25.2.97 ರ ಆದೇಶದಲ್ಲಿ ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಶಿವಮೊಗ್ಗ, ಇ ವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ವಿಚಾರಣಾಧಿಕಾರಿಗಳು ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ದಿನಾಂಕ:7.4.2001 ರ ಪತ್ರದಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸುತ್ತಾ ಆರೋಪ ಸಂ.1, 2, 4 ಇ ವುಗಳು ಸಂಪೂರ್ಣವಾಗಿ ಸಾಬೀತಾಗಿರುವುದಿಲ್ಲವೆಂದು, ಆರೋಪ-3 ರಲ್ಲಿ ಶಿಕ್ಷಕರ ಆರ್.ಡಿ. ಖಾತೆಯನ್ನು ತೆರೆಯುವಲ್ಲಿ ಅನಗತ್ಯ ವಿಳಂಬ ಮಾಡಿರುವುದು ಕಂಡುಬರುತ್ತದೆ ಎಂದು ಆರೋಪ-5 ರಲ್ಲಿ ಶಿಕ್ಷಕರ ಹಕ್ಕಿನಲ್ಲಿ

ರಜೆ ಇ ಲ್ಲದಿದ್ದರೂ ನಗದೀಕರಣಗೊಳಿಸಿ 3 ದಿನಗಳ ಹೆಚ್ಚಿಗೆ ಗಳಿಕೆ ರಜೆಯನ್ನು ಮಂಜೂರು ಮಾಡಿ ನಂತರ ಸಂಬಂಧಪಟ್ಟ ಶಿಕ್ಷಕರಿಂದ ಈ ಮೊತ್ತವನ್ನು ಕಟಾಯಿಸಿದ್ದು, ಇ ದು ಅಧಿಕಾರಿಯ ಆಡಳಿತಾತ್ಮಕ ಲೋಪವಾಗಿರುತ್ತದೆ ಎಂದು ಆರೋಪ-6 ರಲ್ಲಿ ಶಿಕ್ಷಕರ ವೇತನದಿಂದ ಟಿ.ವಿ, ಮೋಪೆಡ್ ಸಾಲದ ಕಂತುಗಳ ಬಾಬ್ತು, ಸರಿಯಾದ ದಾಖಲೆಗಳನ್ನು ನಿರ್ವಹಿಸಿರುವುದಿಲ್ಲ ಎಂದು ಅಭಿಪ್ರಾಯ ಪಟ್ಟಿರುತ್ತಾರೆ.

ವಿಚಾರಣಾಧಿಕಾರಿಗಳ ವರದಿಯನ್ನು ಪರಾಮರ್ಶಿಸಿ, ಸಾಬೀತಾದ ಆರೋಪಗಳ ಬಗ್ಗೆ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಆಪಾದಿತರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ದಿನಾಂಕ:19.7.2001 ರಂದು ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿಮಾಡಲಾಗಿತ್ತು. ಆಪಾದಿತರು ಈ ನೋಟೀಸಿಗೆ ದಿನಾಂಕ:6.8.2001 ರಂದು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ವಿಚಾರಣಾ ಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಳ್ಳದೆ ತನ್ನನ್ನು ದೋಷಮುಕ್ತರನ್ನಾಗಿ ಮಾಡುವಂತೆ ಕೋರಿದ್ದರು. ಇ ವರು ದಿನಾಂಕ: 31.10.2003 ರಂದು ವಯೋನಿವೃತ್ತಿ ಹೊಂದಿರುತ್ತಾರೆ.

ವಿಚಾರಣಾಧಿಕಾರಿಗಳ ಅಭಿಪ್ರಾಯ ಮತ್ತು ಆಪಾದಿತರು ಸಲ್ಲಿಸಿರುವ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಲಾಯಿತು. ಸಾಬೀತಾದ ಆರೋಪಗಳಿಗೆ ಅವರ ನಿವೃತ್ತಿ ವೇತನದಿಂದ ಮಾಹೆಯಾನ ರೂ.500/-ಗಳನ್ನು 2 ವರ್ಷಗಳ ಅವಧಿಗೆ ಕಟಾಯಿಸುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಕೆಸಿಎಸ್ಆರ್ ನಿಯಮ 214 ರ ಮೇರೆಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ತಿಳಿಸುವಂತೆ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (7) ರ ದಿ:15.7.2004 ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಸದರಿ ಪ್ರಸ್ತಾವನೆಗೆ ಸಹಮತಿಯನ್ನು ನೀಡಿರುತ್ತದೆ. ಈ ಹಿನ್ನಲೆಯಲ್ಲಿ ಶ್ರೀ ಕೆ.ಮುರುಗಪ್ಪ, ನಿವೃತ್ತ ಹಿರಿಯ ಉಪನ್ಯಾಸಕರು, ಇ ವರಿಗೆ ದಂಡನೆ ವಿಧಿಸಲು ನಿರ್ಧರಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇ ಡಿ 222 ಡಿಜಿಡಿ 96 ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958 ರ ನಿಯಮ 214 ರ ಮೇರೆಗೆ ಶ್ರೀ ಕೆ.ಮುರುಗೆಪ್ಪ, ನಿವೃತ್ತ ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಶಿವಮೊಗ್ಗ, ಇ ವರ ನಿವೃತ್ತಿ ವೇತನದಿಂದ ಪ್ರತಿ ಮಾಹೆಯಾನ ರೂ.500/- (ಐದುನೂರು ರೂಪಾಯಿಗಳು) 2 ವರ್ಷಗಳ ಅವಧಿಗೆ ಕಟಾಯಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1125

**ಎಫ್.ಆರ್.ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ.(ಸೇ-1,2)

## ENERGY SECRETARIAT

**Sub :** Reduction of the capacity of Kumaradhara Mini Hydel Project from 48 M.W to 22 M.W. by M/s Bhoruka Power Corporation Limited-Orders relating to.

**Read :** 1. Government Order No. DE 154 PPC 94 (3) dated: 6.9.1994.

2. Letter No. KRED/06/Kumardhara 2004/1434 dated: 5/6.8.2004 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, Government has allotted 48. M.W. capacity Kumardhara Mini Hydel Project to M/s Bhoruka Power Corporation Limited at Kakve Village, Puttur Taluk, Dakshina Kannada District.

(2) The Managing Director, Karnataka Renewable Energy Development Limited Bangalore in his letter read at (2) above has stated that the submersion of land is more and the project cost is higher if the developer implementing 48 M.W. Capacity and requested to reduce the allotted capacity from 48 M.W to 22 M. W. Hence, the following order:

**Government Order No. DE 333 NCE 2004 Bangalore dated: 6th October 2004**

(3) In the circumstances explained in the preamble and other careful consideration Government are pleased to reduce the alloted capacity of Kumaradhara Mini Hydel Project from 48 M.W. to 22 M. W. by M/S Bhoruka Power Corporation Limited at Kakve, Puttur Taluk, Dakshina Kannada District subject to condition that the developer should execute an fresh agreement with Government for the reduced capacity.

(4) The other terms and conditions shall continue

By Order and in the name of the Governor of Karnataka,

**K. L. JAYARAM**

PR-1156

Under Secretary to Government, Energy Department.